# ಡಾ. ಎ. ಕೆ. ರಾಮಾನುಜನ್



ವಿಶ್ವನಾಥ ಬದಿಕಾನ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಡಾ. ಎ. ಕೆ. ರಾಮಾನುಜನ್

ವಿಶ್ವನಾಥ ಬದಿಕಾನ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**Dr. A. K. RAMANUJAN** : By Vishwanatha Badikana, Published by Dr. Karigowda Beechanahalli, Director, Prasaranga, Kannada University, Hampi, Vidyaranya, Kamalapura - 583 221,
Pages viii + 28, **Rs. 10/-**

First Edition 1995

ನಮ್ಮವರು ಪುಸ್ತಕಮಾಲೆ – ೧೪

© ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೫

**ಮುಖಪುಟ ವಿನ್ಯಾಸ : ಕೆ. ಮುರಳಿ**

**ಪ್ರಕಾಶಕರು**
**ಡಾ. ಕರೀಗೌಡ ಬೀಚನಹಳ್ಳಿ**
**ನಿರ್ದೇಶಕರು, ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ, ಕಮಲಾಪುರ – ೫೮೩ ೨೨೧**

**ಬೆಲೆ : ಹತ್ತು ರೂಪಾಯಿಗಳು**

ಮುದ್ರಕರು :
**ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.**
ಚಾಮರಾಜಪೇಟೆ, ಬೆಂಗಳೂರು – ೫೬೦ ೦೧೮
ದೂರವಾಣಿ : ೬೨೫೭೩೬

# ನಿವೇದನೆ

ಹಂಪಿ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ–ಕಲೆ, ಅಭಿಜಾತ–ಜಾನಪದ, ಮಾರ್ಗ–ದೇಸಿ, ಸ್ವಕೀಯ–ಪರಕೀಯ, ಪೌರ್ವಾತ್ಯ–ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ

ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

# ಪರಿವಿಡಿ

# ಡಾ. ಎ. ಕೆ. ರಾಮಾನುಜನ್

ಜುಲೈ ೨೪, ೧೯೯೨ರಂದು ಎ.ಕೆ. ರಾಮಾನುಜನ್ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದಿದ್ದರು. ಕನ್ನಡದ ಉತ್ತಮ ಕತೆ, ಕವನ, ಕಾದಂಬರಿಗಳನ್ನು ಆಯ್ದು ಇಂಗ್ಲಿಷಿಗೆ ಅನುವಾದಿಸುವ ವಿಶ್ವವಿದ್ಯಾಲಯದ ಯೋಜನೆಯ ಸಭೆಗಾಗಿ ಅವರನ್ನು ಕರೆಯಲಾಗಿತ್ತು. ಅನಂತರ ಆಗಸ್ಟ್ ೧೬, ೧೯೯೨ರಂದು 'ಸಂಶೋಧನ ಕಮ್ಮಟ'ದ ಉದ್ಘಾಟಕರಾಗಿಯೂ ರಾಮಾನುಜನ್ನರು ಬಂದಿದ್ದರು. ಉದ್ಘಾಟನ ಭಾಷಣ ಮಾಡುತ್ತ ಸಂಶೋಧಕನೊಬ್ಬನ ಜವಾಬ್ದಾರಿಯುತ ಅಭ್ಯಾಸದ ಕುರಿತು ಸ್ಥೂಲವಾದ ಪರಿಚಯ ಮಾಡಿಕೊಟ್ಟರು. ಭಾಷಣದ ಕೊನೆಗೆ ಸಂಶೋಧನೆಗೆ ಸಂಬಂಧಿಸಿದಂತೆ ಅವರು ಒಂದು ಕಥೆ ಹೇಳಿದರು. " ಮುದುಕಿಯೊಂದು ಬೀದಿ ದೀಪದ ಕೆಳಗೆ ಏನೋ ಹುಡುಕುತ್ತಿತ್ತಂತೆ. ಆಗ ದಾರಿಹೋಗುವವರು ಕೇಳಿದರಂತೆ, 'ಏನಜ್ಜಿ ಹುಡುಕುತ್ತಿದ್ದೀ' ಅಂತ. ಮುದುಕಿ ಹೇಳಿತಂತೆ, 'ಗುಡಿಸಲಿನೊಳಗೆ ಕಳೆದು ಹೋದ ಸೂಜಿಯೊಂದನ್ನು ಹುಡುಕುತ್ತಿದ್ದೇನೆ'. 'ಸೂಜಿ ಅಲ್ಲಿ ಕಳೆದು ಹೋಗಿದ್ದರೆ ಇಲ್ಲಿ ಯಾಕೆ ಹುಡುಕುತ್ತಿದ್ದೀ'ಯೆಂದು ಅವರು ಕೇಳಿದರಂತೆ. ಆಗ ಮುದುಕಿ ಹೇಳಿತಂತೆ, 'ಗುಡಿಸಲಿನೊಳಗೆ ಕತ್ತಲೋ ಕತ್ತಲು; ಅದಕ್ಕೇ ಇಲ್ಲಿ, ಬೀದಿ ದೀಪದ ಕೆಳಗೆ ಹುಡುಕುತ್ತಾ ಇದ್ದೇನೆ.'' ನಮ್ಮ ಸಂಶೋದನೆಯ ಕೆಲಸಗಳು ಹೀಗಾಗಿವೆ. ಎಲ್ಲಿಯೋ ಕಳೆದುಕೊಂಡಿರುತ್ತೇವೆ. ಮತ್ತೆಲ್ಲಿಯೋ ಹುಡುಕುತ್ತಿರುತ್ತೇವೆ. ಹೀಗಾಗಬಾರದು. ಎಲ್ಲಿ ಕಳೆದಿದ್ದೇವೆಯೋ ಅಲ್ಲಿಯೇ ಹುಡುಕಬೇಕು– ಹೀಗೆ, ಸಂಶೋಧನೆಯ ಹುಡುಕಾಟ ಮತ್ತು ವಿಷಯದ ವ್ಯಾಪ್ತಿಯ ಕುರಿತು ಸಂಶೋಧಕರಿಗೆ ರಾಮಾನುಜನ್ ಎಚ್ಚರಿಕೆಯ ಮಾತನ್ನೇ ಹೇಳಿದರು.

ಹೆಸರಿನಿಂದಲೇ ಅರ್ಥಮಾಡಿಕೊಳ್ಳಬಹುದಾಗಿರುವಂತೆ ರಾಮಾನುಜನ್ ಮೂಲತಃ ತಮಿಳು ಮಾತೃಭಾಷೆಯಿಂದ ಬಂದವರು. ಆದರೆ ಅವರು ಹುಟ್ಟಿದ್ದು, ಅಭ್ಯಾಸ,ಅಧ್ಯಯನ, ಬರಹಗಳಿಗೆ ತೊಡಗಿದ್ದು ಕನ್ನಡಿಗರ ನಡುವೆ. ಅಲ್ಲದೆಯೇ ರಾಮಾನುಜನ್‌ಗೆ ಅನೇಕ ದ್ರಾವಿಡ ಭಾಷೆಗಳ ಪರಿಚಯವಿತ್ತು. ತಮಿಳು, ಕನ್ನಡ, ತೆಲುಗು – ಭಾಷೆಗಳ ಸಾಹಿತ್ಯಗಳನ್ನು ಅವರು ಇಂಗ್ಲಿಷಿಗೆ ಸಮರ್ಥವಾಗಿ ಅನುವಾದಿಸಿದರು. ಹಾಗಾಗಿ ಕವಿ, ಕತೆಗಾರ, ಕಾದಂಬರಿಕಾರ ಮಾತ್ರವಲ್ಲ ಒಬ್ಬ ಸೃಜನಶೀಲ ಅನುವಾದಕರೆಂದು ಅವರು ಪ್ರಸಿದ್ಧಿ ಪಡೆದರು.

ಎ.ಕೆ. ರಾಮಾನುಜನ್ ೧೯೨೯ ಮಾರ್ಚ್ ೧೬ರಂದು ಮೈಸೂರಿನಲ್ಲಿ ಜನಿಸಿದರು. ಅವರ ಪೂರ್ಣ ಹೆಸರು ಅತ್ತೀಪೇಟೆ ಕೃಷ್ಣಸ್ವಾಮಿ ರಾಮಾನುಜನ್ ಅಯ್ಯಂಗಾರ್. ರಾಮಾನುಜನ್‌ರ ತಂದೆಯ ಹೆಸರು ಎ.ಎ. ಕೃಷ್ಣಸ್ವಾಮಿ. ಅವರು ಮೈಸೂರಿನ ಮಹಾರಾಜ ಕಾಲೇಜಿನ ಸಂಖ್ಯಾಶಾಸ್ತ್ರ, ಗಣಿತಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದರು. ಖಗೋಳಶಾಸ್ತ್ರ ಮತ್ತು ಸಂಸ್ಕೃತವನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಅವರು ತಾಯಿ ಅಸಾಮಾನ್ಯ ವ್ಯಕ್ತಿತ್ವದ ಸ್ತ್ರೀಯೆಂದು,

ಅನ್ಯಧರ್ಮದ ಸೊಸೆಯೆಂದು ಹೊಗಳಿಸಿಕೊಂಡವರಂತೆ. ರಾಮಾನುಜನ್‌ರ ಪತ್ನಿಯ ಹೆಸರು ಮಾಲಿ ಡೇನಿಯಲ್. ಅವರ ಹುಟ್ಟೂರು ಕೇರಳ. ಆಕೆ ಸ್ವತಃ ಉತ್ತಮ ಲೇಖಕಿ. 'ಹಳದಿ ಮೀನು' (೧೯೬೬) ಕಾದಂಬರಿಯ ಇಂಗ್ಲಿಷ್ ಮೂಲದ ಕರ್ತೃ 'ಶೌರಿ'. ರಾಮಾನುಜನ್ನರಿಗೆ ಇಬ್ಬರು ಮಕ್ಕಳು – ಕೃತಿಕಾ ಮತ್ತು ಕೃಷ್ಣಸ್ವಾಮಿ.

ಮೈಸೂರಿನಲ್ಲಿ ಹುಟ್ಟಿದರೂ ರಾಮಾನುಜನ್‌ರ ಮನೆಯ ಮಾತು ತಮಿಳು. ತಮ್ಮ ಮನೆಯ ವಾತಾವರಣದ ಬಗ್ಗೆ ರಾಮಾನುಜನ್ ಈ ರೀತಿ ಹೇಳುತ್ತಾರೆ: "ನಮ್ಮ ಮನೆಯಲ್ಲಿ ಮೂರು ಸ್ತರಗಳಿದ್ದುವು. ಅಡಿಗೆ ಮನೆ, ಊಟದ ಮನೆ ಇದ್ದ ನೆಲ ಮಾಳಿಗೆಯ ಭಾಷೆ ತಮಿಳು. ಖಗೋಳಶಾಸ್ತ್ರಜ್ಞ, ಗಣಿತಶಾಸ್ತ್ರಜ್ಞ ಆಗಿದ್ದ ಅಪ್ಪ ಹೆಚ್ಚುಕಾಲು ಇರುತ್ತಿದ್ದುದು ಮೊದಲ ಮಹಡಿಯಲ್ಲಿ. ಅಲ್ಲಿನ ಭಾಷೆ ಸಂಸ್ಕೃತ ಮತ್ತು ಇಂಗ್ಲಿಷ್. ಅದರ ಮೇಲೆ ಇದ್ದದ್ದು ಖುಲ್ಲಾ ಮಹಡಿ. ಅಲ್ಲಿಂದ ನಮಗೆಲ್ಲ ನಕ್ಷತ್ರಗಳನ್ನು ತೋರಿಸಿ ಅವುಗಳ ಇಂಗ್ಲಿಷ್ ಹಾಗೂ ಸಂಸ್ಕೃತ ಹೆಸರುಗಳನ್ನು ಹೇಳುತ್ತಿದ್ದರು. ಅಲ್ಲಿಂದ ಕೆಳಗೆ ನೋಡಿದರೆ ಕನ್ನಡ ಮಾತಿನ ಊರು, ದನಗಾಹಿಗಳ ಪಾಳ್ಯ ಎಲ್ಲಾ ಕಾಣುತ್ತಿತ್ತು. ಮೈಥುನದಲ್ಲಿ ತೊಡಗಿದ ನಾಯಿಗಳನ್ನು, ದನಗಳನ್ನು ನೋಡಿದ್ದು, ಬೈಗುಳದ ಅತ್ಯುತ್ತಮ ನುಡಿಮುತ್ತುಗಳನ್ನು ಕಲಿತದ್ದು ಎಲ್ಲ ಅಲ್ಲಿಂದಲೇ. ನಾವು ದೊಡ್ಡವರಾದಂತೆಲ್ಲ ಹೆಚ್ಚು ಹೆಚ್ಚು ಸಮಯ ಮೊದಲ ಮಹಡಿಯಲ್ಲಿಯೇ ಕಳೆಯಲಾರಂಭಿಸಿದೆವು. ಓದು, ಮಾತು, ಚೆಸ್–ಎಲ್ಲಾ ಅಪ್ಪನ ಸುತ್ತ ಕುಳಿತೇ ನಡೆಯುತ್ತಿತ್ತು. ಆದರೆ ಕೆಳ ಮಹಡಿಯ ಊಟದ, ಜಾನಪದ ಕಥೆಗಳ, ಸ್ತ್ರೀ ಪ್ರಪಂಚದ ಸೆಳೆತ ಇದ್ದೇ ಇತ್ತು. ಅವರ ಮನೆಯಲ್ಲಿ ಮುಸ್ಸಂಜೆ ಊಟದ ಹೊತ್ತಿಗೆ ಮಕ್ಕಳಿಗೆಲ್ಲಾ ಕಥೆ ಹೇಳುತ್ತಿದ್ದರಂತೆ. ಅಜ್ಜಿ, ಚಿಕ್ಕಮ್ಮ, ಅಡುಗೆಯವರು ಅಲ್ಲಿ ಪ್ರಮುಖ ನಿರೂಪಕರು. ಅಮ್ಮ ಅಥವಾ ಇನ್ಯಾರೇ ಅಧಿಕಾರವಿರುವ ವ್ಯಕ್ತಿ ಅಲ್ಲ" ಎಂದು ಹೇಳುತ್ತಾರೆ (ಸಂಚಯ ಪತ್ರಿಕೆ ೧೯೯೩ – ೧೪).

ಹೀಗೆ – ಮನೆಯ ಮೂರು ಮಹಡಿಗಳ ನಡುವಿನ ಇವರ ಓಡಾಟ ನಿಜವಾಗಿ ವಿಭಿನ್ನ ಸಂಸ್ಕೃತಿಗಳ ನಡುವಿನ ಓಡಾಟ ಆಗಿತ್ತು. ಈ ಪ್ರಪಂಚಗಳ ನಡುವಿನ ಸಂಬಂಧಕ್ಕೆ ಮಾತು ಕೊಡುವ ಹಂಬಲ, ಪ್ರಯತ್ನವನ್ನು ರಾಮಾನುಜನ್ನರ ಜೀವನದಲ್ಲೂ ಕೃತಿಗಳಲ್ಲೂ ಕಾಣಬಹುದು.

ರಾಮಾನುಜನ್ನರೇ ಹೇಳುವ ಹಾಗೆ, "ಸಂಸ್ಕೃತ – ಇಂಗ್ಲಿಷ್ ಪಿತೃಭಾಷೆಗಳಾದರೆ, ತಮಿಳು – ಕನ್ನಡ ನಮ್ಮ ಮಾತೃಭಾಷೆಗಳು. ಸಂಸ್ಕೃತ ಪ್ರಾಚೀನ ಭಾರತದ ಭಾಷೆ. ಮಾತೃಭಾಷೆಗಳು ಜೊತೆಗೆ ಆಟ ಆಡುವ ಮಕ್ಕಳ, ಸ್ತ್ರೀಯರ, ಮನೆಗೆಲಸದವರ ಪ್ರಪಂಚಕ್ಕೆ ಸೇರಿದ ಭಾಷೆ" (ಸಂಚಯ ಪತ್ರಿಕೆ : ೧೯೯೩ : ೧೫).

ರಾಮಾನುಜನ್ನರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಇಂಗ್ಲಿಷ್ ಬಿ.ಎ. (ಆನರ್ಸ್) ಮತ್ತು ಎಂ. ಎ. ಪದವಿ ಗಳಿಸಿದರು. ನಂತರ ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ವಿಭಾಗದಲ್ಲಿ 'ಫೆಲೋ' ಆಗಿ ಡಬ್ಲ್ಯು. ಬಿ. ಏಟ್ಸ್ ಕುರಿತು ಅಧ್ಯಯನ ಮಾಡಿದರು. ೧೯೫೦ರಿಂದ ೧೯೫೮ರವರೆಗೆ ಎಂ. ಎಸ್. ವಿಶ್ವವಿದ್ಯಾಲಯ ಬರೋಡ, ಲಿಂಗರಾಜ ಕಾಲೇಜು ಬೆಳಗಾವಿ, ತ್ಯಾಗರಾಜ ಕಾಲೇಜು

ಮಧುರೈ, ಎಸ್. ಎನ್. ಕಾಲೇಜು ಕ್ವಿಲಾನ್ – ಹೀಗೆ ಬ ' ಬೇರೆ ಕಡೆ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ಮಾಡಿದರು. ಪೂಣಾದ ಡೆಕ್ಕನ್ ಕಾಲೇಜಿನಲ್ಲಿ ಭಾಷಾಶಾಸ್ತ್ರ ಅಭ್ಯಾಸ ಮಾಡಿದರು. ಫುಲ್‌ಬ್ರೈಟ್ ಸ್ಕಾಲರ್‌ಶಿಪ್ ಮತ್ತು ಸ್ಮಿತ್‌ಮಂಡ್ ಸ್ಕಾಲರ್‌ಶಿಪ್ ಪಡೆದು ಅಮೇರಿಕಾದ ಪ್ರತಿಷ್ಠಿತ ವಿಶ್ವವಿದ್ಯಾನಿಲಯಗಳಲ್ಲೊಂದಾದ ಇಂಡಿಯಾನ ಯೂನಿವರ್ಸಿಟಿಗೆ ಹೋದರು. ಇದು ಅವರ ಬದುಕಿಗೆ ಮಹತ್ತರವಾದ ತಿರುವನ್ನು ತಂದಿತು. ಅಲ್ಲಿ ಪ್ರಖ್ಯಾತ ಭಾಷಾವಿಜ್ಞಾನಿ ಪ್ರೊಫೆಸರ್ ಹೌಸ್ ಹೋಲ್ಡರ್ ಅವರೊಂದಿಗೆ ಪಿಎಚ್.ಡಿ ಪದವಿಗಾಗಿ ಕೆಲಸ ಮಾಡಿದರು. ೧೯೬೧ರಲ್ಲಿ, ಭಾಷಾಶಾಸ್ತ್ರದಲ್ಲಿ 'ಜನರೇಟಿವ್ ಗ್ರಾಮರ್ ಆಫ್ ಲಿಂಗ್ವಿಸ್ಟಿಕ್ಸ್' ವಿಷಯದ ಕುರಿತು ಪಿಎಚ್.ಡಿ. ಪದವಿ ಪಡೆದುಕೊಂಡರು. ಚಿಕಾಗೋ ವಿಶ್ವವಿದ್ಯಾಲಯದ 'ಸಾಮಾಜಿಕ ಚಿಂತನೆಯ ಸಮಿತಿ'ಯು ರಾಮಾನುಜನ್ನರ ಸೃಜನಶೀಲ ವಿದ್ವತ್ತನ್ನು ಗುರುತಿಸಿ, ವರ್ಷದಲ್ಲಿ ೬ ತಿಂಗಳು ಬೋಧಿಸಲು ಮತ್ತು ಉಳಿದ ೬ ತಿಂಗಳು ತನ್ನ ಸ್ವಂತದ ಬರವಣಿಗೆಯಲ್ಲಿ ತೊಡಗಿಸಿಕೊಳ್ಳಲು ಅನುವು ಮಾಡಿಕೊಟ್ಟಿತು. ಅದಾದ ಮೇಲೆ ವಿಸ್ಕಾನ್ಸಿನ್, ಬರ್ಕ್ಲಿ ಮತ್ತು ಮಿಚಿಗನ್ ವಿಶ್ವವಿದ್ಯಾಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿದ್ದರು. ೧೯೬೨ರಲ್ಲಿ ರಾಮಾನುಜನ್ ಚಿಕಾಗೋ ವಿಶ್ವವಿದ್ಯಾಲಯಕ್ಕೆ ಹೋದರು. ಸಂಸ್ಕೃತದ ಜೊತೆಗೆ ಆಡುಭಾಷೆಗಳನ್ನೂ ಉತ್ತರ ಭಾರತದ ಜೊತೆಗೆ ದಕ್ಷಿಣ ಭಾರತವನ್ನೂ ಭಾರತೀಯ ಸಾಂಸ್ಕೃತಿಕ ಅಧ್ಯಯನ ಒಳಗೊಳ್ಳುವಂತೆ ಮಾಡಿದರು. ೧೯೬೩ರ ಬೇಸಿಗೆಯಲ್ಲಿ ಇಂಡಿಯಾನ ವಿಶ್ವವಿದ್ಯಾನಿಲಯದ ಸ್ಕೂಲ್ ಆಫ್ ಲೆಟರ್ಸ್‌ಗೆ ಫೆಲೋ ಆದರು. ಆ ಸಂದರ್ಭದಲ್ಲಿ ಅವರು ಬ್ಲೂಮಿಂಗ್‌ಟನ್‌ನಲ್ಲಿ ವಾಸವಿದ್ದರು. ನಂತರ ಅವರು ಚಿಕಾಗೋ ವಿಶ್ವವಿದ್ಯಾನಿಲಯದಲ್ಲಿ ದಕ್ಷಿಣ ಏಷ್ಯಾ ಭಾಷಾ ವಿಭಾಗದ ಮುಖ್ಯಸ್ಥರಾದರು.

ರಾಮಾನುಜನ್ ಕೆಲಸ ಮಾಡಿರುವ ಸಮಿತಿಗಳೂ ಅವರು ಗಳಿಸಿರುವ ಗೌರವಗಳೂ ಹಲವು. ಕವಿ, ಅನುವಾದಕ, ವಿದ್ವಾಂಸನೆಂದು ಬೇರೆ ಯಾವ ಕನ್ನಡಿಗನಿಗೂ ಸಿಗದ ಅಂತಾರಾಷ್ಟ್ರೀಯ ಮನ್ನಣೆ ರಾಮಾನುಜನ್‌ಗೆ ಲಭಿಸಿದೆ. ಹಾರ್ವರ್ಡ್, ಆಕ್ಸ್‌ಫರ್ಡ್ ಮೊದಲಾದ ವಿಶ್ವವಿದ್ಯಾನಿಲಯಗಳು ವಿಶೇಷ ಉಪನ್ಯಾಸಗಳಿಗಾಗಿ ಅವರನ್ನು ಆಹ್ವಾನಿಸಿವೆ. ೧೯೭೬ರಲ್ಲಿ ಭಾರತ ಸರಕಾರದ ವತಿಯಿಂದ ಅವರಿಗೆ 'ಪದ್ಮಶ್ರೀ' ಪ್ರಶಸ್ತಿ ನೀಡಲಾಯಿತು. ಅತ್ಯಂತ ಶ್ರೀಮಂತವಾದ ಮೆಕಾರ್ಥರ್ ಪ್ರೈಜ್ ಫೆಲೋಷಿಪ್ಪನ್ನು ೧೯೮೩–೮೮ರ ಅವಧಿಯಲ್ಲಿ ಅವರಿಗೆ ಕೊಡಲಾಯಿತು. 'ಟೈಮ್ಸ್ ಆಫ್ ಇಂಡಿಯಾ' ರಾಮಾನುಜನ್ನರನ್ನು 'ಸಾಂಸ್ಕೃತಿಕ ನಾವಿಕ' ಎಂದು ಮುಕ್ತ ಕಂಠದಿಂದ ಕರೆದು ಪ್ರಶಂಸಿಸಿತು. ವಿಮರ್ಶಕರನೇಕರು ರಾಮಾನುಜನ್ನರನ್ನು 'ದುಭಾಷಿ' ಎಂದು ಕರೆದರು.

ತಮಿಳು ಅವರ ಆಪ್ತ ಭಾಷೆಗಳಲ್ಲಿ ಒಂದು. ತಮಿಳುನಾಡಿನಲ್ಲಿಯ ಅವರ ಸಾಂಸ್ಕೃತಿಕ ಸೇವೆಗಾಗಿ ಆ ಸರಕಾರ ಅವರಿಗೆ ಚಿನ್ನದ ಪದಕ ನೀಡಿ ಗೌರವಿಸಿದೆ. ರಾಮಾನುಜನ್ನರ ಬಹುಮುಖ ಪ್ರತಿಭೆಯನ್ನು ಮೆಚ್ಚಿದ ಅಮೇರಿಕದ ಮೆಕಾರ್ಥರ್ ಪ್ರತಿಷ್ಠಾನವು 'ಜೀನಿಯಸ್ ಅವಾರ್ಡ್' ನೀಡಿದೆ. (ಈ ಪ್ರಶಸ್ತಿಯ ಮೌಲ್ಯ ೨.೬ ಲಕ್ಷ ಡಾಲರುಗಳು. ಎಂದರೆ, ಸುಮಾರು ೭೫ ಲಕ್ಷ ರೂಪಾಯಿಗಳು.) ಅಲ್ಲದೆ ಅಮೇರಿಕದ 'ಆರ್ಟ್ಸ್ ಅಂಡ್ ಸೈನ್ಸ್ ಕಾಂಗ್ರೆಸ್' ತನ್ನ ಗೌರವ ಫೆಲೋಷಿಪ್ ನೀಡಿದೆ.

ರಾಮಾನುಜನ್ ಅವರು ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯನ್ನು ಮತ್ತು ಎಂ.ಜಿ. ಕೃಷ್ಣಮೂರ್ತಿಯವರ ಜೊತೆಯಲ್ಲಿ ಅಡಿಗರ ಕವಿತೆಗಳನ್ನು ಅನುವಾದಿಸಿದ್ದರಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕನ್ನಡಕ್ಕೆ ಸಾಕಷ್ಟು ಲಕ್ಷ್ಯ ಸಿಕ್ಕಿತು. ಇದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯು ೧೯೮೩ರಲ್ಲಿ ವಿಶೇಷ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿತು.

ಜುಲೈ ೧೩, ೧೯೯೩ರಂದು ಚಿಕಾಗೋದ ಆಸ್ಪತ್ರೆಯೊಂದರಲ್ಲಿ ರಾಮಾನುಜನ್ ಹೃದಯ ಸ್ತಂಭನದಿಂದ ನಿಧನರಾದರು. ಜುಲೈ ೧೬ರಂದು ಗಿರೀಶ್‌ಕಾರ್ನಾಡರ 'ನಾಗಮಂಡಲ' ನಾಟಕ ಪ್ರದರ್ಶನಕ್ಕೆ ತಯಾರಾಗುತ್ತಿತ್ತು. ಅದೇ ದಿನ ಚಿಕಾಗೋದಲ್ಲಿ ರಾಮಾನುಜನ್‌ರ ಅಂತ್ಯಸಂಸ್ಕಾರವೂ ಆಯಿತು. ನಿಧನರಾಗುವ ಸಂದರ್ಭದಲ್ಲಿ ತಮ್ಮನ್ನು ತಾವು ಹಲವು ಯೋಜನೆಗಳಲ್ಲಿ ತೊಡಗಿಸಿಕೊಂಡಿದ್ದರು. ೧೭ನೆಯ ಶತಮಾನದ ತೆಲುಗು ಕವಿ ಕ್ಷೇತ್ರಯ್ಯನ ಜಾವಳಿಗಳನ್ನು ಇಂಗ್ಲಿಷಿಗೆ (ವೆನ್ ಗಾಡ್ ಈಸ್ ಎ ಕಸ್ಟಮರ್) ಅನುವಾದಿಸಿದ್ದಾರೆ. ಭಾರತದಲ್ಲಿ ಒಂದು ಕಾರ್ಯಗಾರವನ್ನು ನಡೆಸುವುದು, ಪ್ರಾಚೀನ ತಮಿಳಿನ ನಮ್ಮಾಳ್ವರರ ೧೧೦೨ ಭಕ್ತಿ ಪದಗಳನ್ನು ತನ್ನ ಸಹದ್ಯೋಗಿಗಳ ಜೊತೆ ಇಂಗ್ಲಿಷಿನಲ್ಲಿ ಪುನಾ ರಚಿಸುವುದು – ಹೀಗೆ ಹಲವು ಕೆಲಸದಲ್ಲಿ ಅವರು ನಿರತರಾಗಿದ್ದರು.

# ಕೃತಿಗಳು

**ಸೃಜನಶೀಲ ಕೃತಿಗಳು**

ರಾಮಾನುಜನ್ ಅವರು ಇಂಗ್ಲಿಷಿನಲ್ಲಿ ನಾಲ್ಕು ಮತ್ತು ಕನ್ನಡದಲ್ಲಿ ಮೂರು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಕನ್ನಡದಲ್ಲಿ ಎರಡೇ ಎರಡು ಕಥೆ ಬರೆದು ಕನ್ನಡದ ಮುಖ್ಯ ಕಥೆಗಾರರಲ್ಲಿ ಒಬ್ಬರೆನಿಸಿಕೊಂಡಿದ್ದಾರೆ. ಎರಡು ಬಾನುಲಿ ನಾಟಕಗಳನ್ನು ಮತ್ತು ಒಂದು ಆತ್ಮಚರಿತೆಯಂಥಾ ಕಾದಂಬರಿಯನ್ನು ಬರೆದಿದ್ದಾರೆ.

ರಾಮಾನುಜನ್‌ರ ಕವನ ಸಂಕಲನಗಳು ಕನ್ನಡ ಭಾಷೆಗೆ ಹೊಸ ಹೊಸ ಸಾಧ್ಯತೆಗಳನ್ನು ತೆರೆದು ತೋರಿಸಿವೆ. ಕನ್ನಡದಲ್ಲಿ ಅಡಿಗರ ಪ್ರಭಾವ ಉತ್ತುಂಗದಲ್ಲಿದ್ದಾಗ, ರಾಮಾನುಜನ್ ಅಡಿಗರಿಗಿಂತ ತೀರಾ ಭಿನ್ನವಾದ ಒಂದು ಮಾರ್ಗವನ್ನು ಉದ್ಘಾಟಿಸಿದರು. ಜೊತೆಗೆ ಇಂಗ್ಲಿಷಿನಲ್ಲಿ ಬರೆಯುತ್ತಿರುವ ಭಾರತೀಯ ಕವಿಗಳಲ್ಲಿ ಅವರು ತಮ್ಮದೇ ಆದ ಒಂದು ಸ್ಥಾನವನ್ನು ಗಳಿಸಿದರು.

ರಾಮಾನುಜನ್ ಗಾದೆ, ಕತೆಗಳ ಸಂಗ್ರಹದ ಜೊತೆಗೆ ಇಂಗ್ಲಿಷ್ ಕವನ ಬರೆಯುವುದನ್ನು ರೂಢಿಸಿಕೊಂಡರು. ಹಾಗಾಗಿ ಅವರ ಮೊದಲ ಕವನ ಸಂಕಲನ ಇಂಗ್ಲಿಷಿನಲ್ಲೇ ಬಂತು. ೧೯೬೬ರಲ್ಲಿ ಅವರ ಮೊದಲ ಇಂಗ್ಲಿಷ್ ಕವನ ಸಂಕಲನ 'ದಿ ಸ್ಟ್ರೈಡರ್ಸ್' ಪ್ರಕಟಗೊಂಡಾಗ ಜಗತ್ತು ಅವರನ್ನು ಇಂಗ್ಲಿಷ್ ಕವಿಯೆಂದು ಗುರುತಿಸಿಕೊಂಡಿತು. ನಂತರ ೧೯೭೧ರಲ್ಲಿ 'ರಿಲೇಷನ್ಸ್' ೧೯೭೬ರಲ್ಲಿ 'ಸೆಲೆಕ್ಟೆಡ್ ಪೋಯಮ್ಸ್' ಮತ್ತು ೧೯೮೬ ರಲ್ಲಿ 'ಸೆಕೆಂಡ್ ಸೈಟ್ಸ್' ಸಂಕಲನಗಳು ಪ್ರಕಟಗೊಂಡುವು. ಇವುಗಳಲ್ಲಿ 'ಸೆಕೆಂಡ್ ಸೈಟ್ಸ್' ಅವರ ಅತ್ಯುತ್ತಮ ಇಂಗ್ಲಿಷ್ ಸಂಕಲನಗಳಲ್ಲಿ ಒಂದೆಂದು ವಿಮರ್ಶಕರಿಂದ ಹೊಗಳಿಸಿಕೊಂಡಿದೆ.

ರಾಮಾನುಜನ್ ಇಂಗ್ಲಿಷಿನಲ್ಲಿ ಶ್ರೇಷ್ಠ ಕವಿಯೆನಿಸಿಕೊಂಡರೂ ಅವರು ಮೊದಲು ಕವನ ಬರೆಯಲು ಪ್ರಾರಂಭಿಸಿರುವುದು ಕನ್ನಡದಲ್ಲೇ. ೧೯೬೯ರಲ್ಲಿ 'ಹೊಕ್ಕುಳಲ್ಲಿ ಹೂವಿಲ್ಲ', ೧೯೭೭ರಲ್ಲಿ '....ಮತ್ತು ಇತರ ಪದ್ಯಗಳು' ಹಾಗೂ ೧೯೯೦ರಲ್ಲಿ 'ಕುಂಟೋಬಿಲ್ಲೆ' – ಹೀಗೆ ಮೂರು ಕನ್ನಡ ಕವನ ಸಂಕಲನಗಳನ್ನು ಪ್ರಕಟಿಸಿದರು.

**ಹೊಕ್ಕುಳಲ್ಲಿ ಹೂವಿಲ್ಲ** (೧೯೬೯) ರಾಮಾನುಜನ್ನರ ಮೊದಲ ಕನ್ನಡ ಕವನ ಸಂಕಲನ. ಅದು ಪ್ರಕಟವಾದಾಗ ಎಬ್ಬಿಸಿದ ಉತ್ಸಾಹ, ವಾಗ್ವಾದ ಅಷ್ಟಿಷ್ಟಲ್ಲ. ಆಧುನಿಕ ಕನ್ನಡ ಕಾವ್ಯಕ್ಕೇ ಒಂದು ವಿಶಿಷ್ಟ ತಿರುವು ಕೊಟ್ಟ ಸಂಕಲನವದು. ಮತ್ತು ಸಹಜವಾಗಿಯೇ ಕನ್ನಡದ ಅನೇಕ ಧೀಮಂತ ಮನಸ್ಸುಗಳು ಅದಕ್ಕೆ ಅರ್ಥಪೂರ್ಣವಾಗಿ ಪ್ರತಿಕ್ರಿಯಿಸಿದವು.[೧]

"ಬಚ್ಚಲು ಮನೆ ಗಂಗಾಳದಲ್ಲಿ
ಅಪ್ಪ ಮರೆತ ಹೊಸ ಹಲ್ಲು, ಸ್ವತಂತ್ರವಾಗಿ
ಹುಲ್ಲು ಕಿರಿಯಿತು.
ನಾನು ನೋಡಿದೆ.

— 'ಅಪ್ಪಮಗ'

"ಇದು ಎ.ಕೆ. ರಾಮಾನುಜನ್ ಅವರ 'ಹೊಕ್ಕುಳಲ್ಲಿ ಹೂವಿಲ್ಲ' ಸಂಕಲನದಲ್ಲಿರುವ ಒಂದು ಸಂಪೂರ್ಣ ಕವನ. ಇಂಥ 'ವಿಚಿತ್ರ' ಕಾವ್ಯ ಕನ್ನಡಕ್ಕೆ ಹೊಚ್ಚ ಹೊಸದು'' (ಶಾಂತಿನಾಥ ದೇಸಾಯಿ). ಈ ಸಾಲುಗಳು ಆ ಕಾಲದಲ್ಲಿ ಓದುಬಲ್ಲ ಕನ್ನಡಿಗರನ್ನು ಬೆಚ್ಚಿಸಿದ್ದುಂಟು.

'ಅಂಗುಲ ಹುಳುವಿನ ಪರಕಾಯ ಪ್ರವೇಶ', 'ಒಂದು ಕೊಡೆ ಒಂದು ವಾಚು', 'ಅಜ್ಞಾತ ಪರ್ವದಲ್ಲಿ ಬೃಹನ್ನಳೆ ಸೈರಂಧ್ರಿಯನ್ನು ದೂರದಿಂದ ನೋಡಿದಾಗ' – ಹೀಗೆ ಹಲವು ಕವನಗಳಲ್ಲಿ ವಿಮರ್ಶಕರಿಗೆ, ಓದುಗರಿಗೆ ಹೊಸ ಹೊಸ ಅರ್ಥಗಳನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಾಯಿತು.

ಅವರ ''..... ಮತ್ತು ಇತರ ಪದ್ಯಗಳು'' ಹಾಗೂ ''ಕುಂಟೋ ಬಿಲ್ಲೆ'' ಸಂಕಲನಗಳು ವಿಮರ್ಶಕರಿಂದ ಮೆಚ್ಚುಗೆ ಗಳಿಸಿಕೊಂಡವು.[೨] ಆದರೆ 'ಹೊಕ್ಕುಳಲ್ಲಿ ಹೂವಿಲ್ಲ' ಸಂಕಲನಕ್ಕೆ ಹೋಲಿಸಿಕೊಂಡರೆ ಗುರುತಿಸಬಹುದಾದ ವಿಮರ್ಶೆ ಬಂದಿಲ್ಲವೆನ್ನಬಹುದು. ಏನಿದ್ದರೂ ಭಾಷೆಯ ಬಳಕೆ ಮತ್ತು ವಿಶಿಷ್ಟ ತಂತ್ರದ ಸಾಧನೆಯಿಂದಾಗಿ ಅವರಿಗೆ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಮುಖ್ಯಸ್ಥಾನವೊಂದು ಲಭಿಸಿತು.

**ಎ.ಕೆ. ರಾಮಾನುಜನ್ ಬರೆದದ್ದು ಎರಡು ಕತೆ :**

೧, ಮಧುರೆಯಲ್ಲಿ ಒಂದು ತಲೆ (೧೯೬೫) ೨. ಅಣ್ಣಯ್ಯನ ಮಾನವಶಾಸ್ತ್ರ (೧೯೮೪) ಇವೆರಡೂ ಕತೆಗಳು ಕನ್ನಡದ ಪ್ರಮುಖ ಕಥಾ ಸಂಕಲನಗಳಲ್ಲಿ ನಮೂದಾಗಿವೆ.

ಮಧುರೆಯಲ್ಲಿ ಒಂದು ತಲೆ (೧೯೬೫) ರಾಮಾನುಜನ್‌ರ ಟಿಪಿಕಲ್ ರಚನೆಯಾಗಿದೆ. ರಾಮಾನುಜನ್‌ರ ಈ ಕತೆ ಸರಳವಾಗಿದ್ದರೂ ಹೆಚ್ಚು ಸೂಚ್ಯವಾಗಿದೆ. ದೇವಸ್ಥಾನದ ಪುಷ್ಕರಿಣಿಯ ನೀರಿನಲ್ಲಿ ಮುಳುಗಿ, ಬಾಳೆಯ ಎಲೆಯ ಕೆಳಗೆ ಮರೆಯಾಗಿದ್ದರೂ ಮತ್ತೆ ಮತ್ತೆ ಎದ್ದು ಕಾಣುವ ಮನುಷ್ಯನ ತಲೆ ಒಂದು ಶಕ್ತಿಯುತವಾದ ಸಂಕೇತವಾಗಿದೆ. ಕತೆಯ ನಾಯಕ ಅದನ್ನು ಒಮ್ಮೆ ಮಾತ್ರ ನೋಡಿದ್ದಾನೆ. ಆದರೆ ಅದನ್ನು ಮರೆಯುವುದು ಅವನಿಂದ ಸಾಧ್ಯವಾಗಲಿಲ್ಲ. ಬಸ್ಸಿನಲ್ಲಿ ಕುಳಿತು ಅದನ್ನು ಮಧುರೆಯಂಥ ನಗರದ ಜನ ಜಂಗುಳಿಯ ವರ್ಣ ಸಮುದಾಯದಲ್ಲಿ, ರಾಮಚಂದ್ರರಾಯರಂಥ ಸಂಸ್ಕೃತ ರಸಿಕರ ಸರಸ ಸಂಭಾಷಣೆಯಲ್ಲಿ ಈ ತಲೆಯ ನೆನಪು ಮತ್ತೆ ಮತ್ತೆ ಅವನಿಗೆ ಬರುತ್ತದೆ. ಈ ಸಂಗತಿ ಅಷ್ಟೇನೂ ವಾಡಿಕೆಯದಲ್ಲವಾದರೂ ಮಧುರೆಯಲ್ಲಿ ಇಂಥ ಸಂಗತಿ ನಡೆಯುವುದೇನೂ ಅಸಂಭವವಲ್ಲವೆನ್ನುವಂತೆ, ಕತೆಯ ಪ್ರಾರಂಭಕ್ಕೆ ಮಧುರೆಯ ವರ್ಣನೆಯಿದೆ.[೩] ಕಾವ್ಯದಲ್ಲಿ ಬಳಕೆಯಾಗುವ ಸಂಕೇತಗಳ ಹಾಗೆ ಕತೆಯಲ್ಲೂ ಸಂಕೇತಗಳ ಬಳಕೆಯಾಗಿದೆ.

**ಅಣ್ಣಯ್ಯನ ಮಾನವ ಶಾಸ್ತ್ರ** (೧೯೭೪) ಕನ್ನಡದ ಅತ್ಯುತ್ತಮ ಸಣ್ಣ ಕಥೆಗಳಲ್ಲಿ ಒಂದೆಂದು ಹೆಸರು ಪಡೆದುಕೊಂಡಿದೆ. "ಈ ಕಥೆ ಸುಸಂಭದ್ಧ ನಿರೂಪಣೆಯ ಗತಿಯಲ್ಲಿಯೇ ಒಂದು ಅಸಂಬದ್ಧ ಸ್ಥಿತಿಯನ್ನು ಸಮರ್ಥವಾಗಿ ಎದುರು ನಿಲ್ಲಿಸುತ್ತದೆ. ಅಣ್ಣಯ್ಯನ ಅಪ್ಪನ ಸಾವು ಹಿಂದೂ ಧರ್ಮದ ಸತ್ತಸ್ಥಿತಿಯನ್ನು ಧ್ವನಿಸಿದರೆ, ಆತನ ತಾಯಿಯ ವೈಧವ್ಯದ ಚಿತ್ರ ಆ ಸತ್ತದ್ದನ್ನು ನಂಬಿ ಬದುಕುತ್ತಿರುವ ವಾಸ್ತವಸ್ಥಿತಿಯ ಕ್ರೌರ್ಯವನ್ನೂ ಅದರ ಅಸಂಬದ್ಧ ಸ್ಥಿತಿಯನ್ನೂ ಧ್ವನಿಸುತ್ತದೆ. ಜೊತೆಗೆ ಆತನ ತಾಯಿಯ ವೈಧ್ಯವ್ಯದ ಸ್ಥಿತಿಗೂ ಸಂಬಂಧ ಏರ್ಪಡಿಸುವ ಒಳದನಿಯೂ ಇರುವಂತಿದೆ. ಸುಂದರರಾಯನಿಗೆ ಹಿಂದೂಧರ್ಮ ಮಾರಾಟದ ಸಾಮಗ್ರಿ. ಸುಂದರರಾಯನ ವ್ಯಾಪಾರೀ ಬುದ್ಧಿಗೆ ಅಣ್ಣಯ್ಯ ರೋಸಿಹೋಗುತ್ತಾನೆ. ಆದರೆ ಅಣ್ಣಯ್ಯನೂ ಸುಂದರರಾಯನಿಂದ ಮೂಲಭೂತವಾಗಿ ಭಿನ್ನನೇನಲ್ಲ. ಸುಂದರರಾಯ ಹಿಂದೂ ಧರ್ಮವನ್ನು ಮಾರಿದರೆ ಅಣ್ಣಯ್ಯ ಬೇರೊಂದು ಅರ್ಥದಲ್ಲಿ ಇಲ್ಲಿ ಖರೀದಿಸುತ್ತಿದ್ದಾನೆ. ಎಂಜಲು, ಮಲ ಇತ್ಯಾದಿಗಳು ಮೈಲಿಗೆ ಎಂಬುದು ಹೊಳೆಯುವುದಿಲ್ಲ. ಈ ಎಂಜಲು, ಮಲಗಳ ಬಗ್ಗೆ ವಿಚಿಕಿತ್ಸಕ ಬುದ್ಧಿಯನ್ನು ತೋರುವ ಆತ ಎಂಜಲು ಚಪ್ಪರಿಸುತ್ತಿರುವ ತನ್ನ ಸ್ಥಿತಿಯನ್ನು ಕುರಿತಂತೆ ಅದನ್ನು ತೋರಿಸುವುದಿಲ್ಲ. ಅಲ್ಲಿ ವ್ಯಂಗ್ಯವಿದೆ." (೧೯೯೧ : xvi) ಎಂಬುದಾಗಿ ಜಿ. ಎಚ್. ನಾಯಕ ಅವರು ಅಭಿಪ್ರಾಯಪಟ್ಟಿದ್ದಾರೆ.

'**ಮತ್ತೊಬ್ಬನ ಆತ್ಮಚರಿತ್ರೆ** (೧೯೭೮) ಎ.ಕೆ. ರಾಮಾನುಜನ್ನರೇ ಹೇಳುವಂತೆ, 'ಇದು ಏನು ಅಂದರೆ, ಕತೆಯಲ್ಲ, ಕಾದಂಬರಿ.' "ಆತ್ಮೀಯ ಬರವಣಿಗೆಯ ರೂಪ ಹೊತ್ತು ಪರರ ಅನುಭವದ ಸೊಗಡನ್ನು ಹುದುಗಿಸಿರುವ ಈ ಕೃತಿ ಆತ್ಮಕತೆಯಲ್ಲ ಕಾದಂಬರಿ" ಎಂಬುದಾಗಿ ಜಿ. ಬಿ. ಜೋಷಿಯವರು ಈ ಕೃತಿಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಮತ್ತೊಬ್ಬನ ಆತ್ಮಚರಿತ್ರೆ ಎ.ಕೆ. ರಾಮಾನುಜನ್ನರ ಆತ್ಮಚರಿತ್ರೆಯೋ ಎಂಬ ಗುಮಾನಿಯಾಗುತ್ತದೆ. ಬರಹಗಾರನೊಬ್ಬನು ತನ್ನ ಅಸ್ತಿತ್ವವನ್ನು ತಾನೇ ಪ್ರಶ್ನಿಸುವ, ವಿಮರ್ಶಿಸುವ ತಂತ್ರವು ಈ ಕೃತಿಯಲ್ಲಿರುವುದು ಸ್ಪಷ್ಟ ರಾಮಾನುಜನ್ ಹೇಳುವಂತೆ 'ಇದು ಕಾದಂಬರಿ', ಇದರ ನಾಯಕನ ಹೆಸರು ಕೆ.ಕೆ. ರಾಮಾನುಜನ್. ಈತ ಎ.ಕೆ. ರಾಮಾನುಜನ್‌ಗೆ ಕಾದಂಬರಿ ಬರೆಯಲು ಒತ್ತಾಯಿಸುತ್ತಾನೆ. ಕೆ. ಕೆ. ರಾಮಾನುಜನ್‌ಗೆ ಗೊತ್ತಿರೋದು ಆತ್ಮಕತೆಯೊಂದೇ. ಆದರೆ ಎ.ಕೆ. ರಾಮಾನುಜನ್ ಹೇಳೋದು, "ಎಲ್ಲರಿಗೂ ಇರೋ ಕತೆ ಅದೊಂದೇ. ಕೆಲವರು ಅದನ್ನು ಕತೆ ಅಂತ ಬರೀತಾರೆ. ಕೆಲವರು ಆತ್ಮಕತೆ ಅಂತಾರೆ ಅಷ್ಟೇ. (೧೯೮೦:೫) ನೀವು ಚರಿತ್ರೆ ಓದಿದವರು. ಹೇಳಿಕೊಡಬೇಕೇ? ಮುಖ ಮೂತಿ ನೋಡದೆ ಬರೆದು ಬಿಡಿ" ಹೀಗೆ ತದ್ರೂಪಿ ಕೆ.ಕೆ. ರಾಮಾನುಜನ್‌ಗೆ ಆತ್ಮಕತೆ ಬರೆಯೆಂದು ಒತ್ತಾಯಿಸುತ್ತಾರೆ.

ಎ.ಕೆ. ರಾಮಾನುಜನ್ ಎರಡು ಬಾನುಲಿ ನಾಟಕಗಳನ್ನು ಬರೆದಿದ್ದಾರೆ. ೧. **ಗಾನಪ್ರಿಯ (೧೯೫೫)**, **೨. ನಾದಬಿಂದು (೧೯೫೫)**. ರಾಮಾನುಜನ್ನರಿಗೆ ತಮಿಳು ಕತೆಯೊಂದನ್ನು ಓದಿದಾಗ 'ಗಾನಪ್ರಿಯ' (ಬಡಪಾಯಿ ಬ್ರಹ್ಮರಾಕ್ಷಸ) ನಾಟಕ ಬರೆಯುವುದಕ್ಕೆ ಪ್ರೇರಣೆಯಾಯಿತಂತೆ. ಆ ಕತೆ ಹೀಗಿದೆ; ಒಬ್ಬ ಬ್ರಾಹ್ಮಣ ಬ್ರಹ್ಮರಾಕ್ಷಸವೊಂದನ್ನು ನಾಗಸ್ವರ ವಿದ್ವಾಂಸನ ಕಾಟದಿಂದ ತಪ್ಪಿಸಿ ಆ ಊರಿನ ರಾಜಕುಮಾರಿಯ ದೇಹದಲ್ಲಿ ನೆಲೆ ಕಲ್ಪಿಸುತ್ತಾನೆ. (ಬ್ರಾಹ್ಮಣನೊಬ್ಬ ಬಾಯಿಗೆ ನೀರಿಲ್ಲದೆ ಸತ್ತರೆ ಬ್ರಹ್ಮರಾಕ್ಷಸನಾಗುವುದೆಂಬ ಜನಪದ ನಂಬಿಕೆಯಿದೆ. ಆದರೆ ಈ ಬ್ರಹ್ಮರಾಕ್ಷಸ ಅರಳಿ ಮರದ ಮೇಲೆ ವಾಸಮಾಡಿಕೊಂಡ, ಕೆಟ್ಟ ನಾಗಸ್ವರವನ್ನು ಸದಾ ಕೇಳಿಕೊಂಡು ಪಡಬಾರದ ಪಾಡು ಪಡೆಯುತ್ತಿದ್ದವನು. ಹೊಸನೆಲೆ ಸಿಕ್ಕಿದೊಡನೆ ಸಮೀಚೀನ ಭೋಜನವನ್ನು ರಾಜಕುಮಾರಿಯ

ಕಂಠಶ್ರೀಯನ್ನು ಅನುಭವಿಸಿಕೊಂಡು ಅಲ್ಲೇ ಖಾಯಂ ಆಗಿ ಇದ್ದುಬಿಡುವ ಹುನ್ನಾರ ಹಾಕುತ್ತಾನೆ. ಯಾವ ಮಂತ್ರವಾದಿಗೂ ಜಗ್ಗುವುದಿಲ್ಲ. ಕೊನೆಗೆ ಇದೇ ಬ್ರಾಹ್ಮಣ ಆ ನಾಗಸ್ವರ ವಿದ್ವಾಂಸನನ್ನು ಅರಮನೆಗೆ ಕರೆದುಕೊಂಡು ಹೋಗಿ ಅವನ ಕರ್ಣ ಕಠೋರ ಸಂಗೀತದ ಸಹಾಯದಿಂದ ಬ್ರಹ್ಮರಾಕ್ಷಸನನ್ನು ಓಡಿಸಿ ರಾಜನ ವಿಶ್ವಾಸ ಗಳಿಸುತ್ತಾನೆ. ಆ ಮೂಲಕ ತನ್ನ ಬಡತನವನ್ನು ದೂರಮಾಡಿಕೊಂಡು ತನ್ನ ಹೆಂಡತಿಯ ನಿತ್ಯ ಪೀಡೆಯಿಂದ ತಾನೂ ಬಿಡುಗಡೆ ಪಡೆಯುತ್ತಾನೆ. ಬ್ರಾಹ್ಮಣ ಮಾಧವ ರಾಜಕುಮಾರಿಯನ್ನೇನೂ ಲಗ್ನವಾಗುವುದಿಲ್ಲ. ಅದರ ಬದಲಾಗಿ ಆ ನಾಗಸ್ವರದ ವಿದ್ವಾಂಸನನ್ನು ತನ್ನ ಊಳಿಗದವನನ್ನಾಗಿ ನೇಮಿಸಲು ರಾಜನನ್ನು ಕೋರುತ್ತಾನೆ. ರಾಜ ಒಪ್ಪುತ್ತಾನೆ. ನಾಗಸ್ವರ ವಿದ್ವಾಂಸನಿಗೂ ಹಿಡಿಸಲಾರದಷ್ಟು ಸಂತೋಷವಾಗುತ್ತದೆ. ವಿದ್ವಾಂಸ ಕೇಳುತ್ತಾನೆ. "ನಮ್ಮ ಸಂಗೀತ ಸಾಧನೆ ತಮಗೆ ಪ್ರಿಯವಾಯಿತೇ ಬುದ್ದಿ ? ದಿನವೂ ಬಂದು ಭಾರಿಸುತ್ತೇನೆ." ಬ್ರಾಹ್ಮಣ ಮಾಧವ ಉತ್ತರಿಸುತ್ತಾನೆ. "ಛೆ ! ಛೆ! ಅಪಾರ್ಥ ಮಾಡಿಕೊಳ್ಳಬೇಡ. ನಿನಗೆ ಸಂಬಳಕೊಡುವುದು ನಾಗಸ್ವರ ಬಾರಿಸುವುದಕ್ಕಲ್ಲ, ಬಾರಿಸದಿರುವುದಕ್ಕೆ. ತಿಳಿತೇ ? ನನಗೆ ಭೂತ ದಯೆ ಬಹಳ.'"

'ನಾದಬಿಂದು' ರಾಮಾನುಜನ್ನರು ಬರೆದ ಇನ್ನೊಂದು ಬಾನುಲಿ ನಾಟಕ. ಈ ನಾಟಕಕ್ಕೂ ಜನಪದ ಕತೆಯ ಪ್ರಭಾವವಿದೆ. ರಾಮಚಂದ್ರ ಎಂಬುವನು ಕಪ್ಪೆಗಳ ರಾಜ್ಯದಲ್ಲಿ ಸಿಕ್ಕಿ ಬೀಳುತ್ತಾನೆ. ಅವನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಕಪ್ಪೆಗಳ ಮೇಲೆ ಮನುಷ್ಯನ ದೌರ್ಜನ್ಯದ ಪ್ರಸ್ತಾಪ ಮಾಡಲಾಗುತ್ತದೆ. ಮನುಷ್ಯರ ಸಂಗೀತ ಮತ್ತು ಕಪ್ಪೆಗಳ ಸಂಗೀತದ ತುಲನಾತ್ಮಕ ಚರ್ಚೆಯೂ ನಡೆಯುತ್ತದೆ. ಎರಡು ಲೋಕಗಳ ಮುಖಾಮುಖಿಯಲ್ಲಿ ನಾಟಕ ಲಘುಧಾಟಿಯಲ್ಲೇ ಅನೇಕ ಕುತೂಹಲಕಾರಿ ಪ್ರಶ್ನೆಗಳನ್ನು ಕೇಳುತ್ತದೆ. ಹಾಸ್ಯ ನಾಟಕವಾಗಿ, ಮಕ್ಕಳ ನಾಟಕವಾಗಿ ಈ ಕೃತಿ ರಂಗದ ಮೇಲೂ ಯಶಸ್ವಿಯಾಗಬಲ್ಲದು.[೪] ಎರಡೂ ನಾಟಕಗಳು ಜನಪದ ಕತೆಯನ್ನು ಆಧರಿಸಿ ಬರೆದಂತಹವುಗಳು.

## ಜಾನಪದ ಕೃತಿಗಳು

ಜಾನಪದ ರಾಮಾನುಜನ್ನರಿಗೆ ತುಂಬ ಪ್ರಿಯವಾದ ಕ್ಷೇತ್ರ. ಜಾನಪದದಲ್ಲಿ ಹಲವಾರು ಲೇಖನಗಳನ್ನು ಮತ್ತು ಎರಡು ಮಹತ್ವದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಮೈಸೂರಲ್ಲಿ ನಡೆದ ಜಾನಪದ ಕಮ್ಮಟವೊಂದರಲ್ಲಿ ಅವರು ೨೧ ದಿನಗಳ ಕಾಲ ಅಲೆನ್ ಡಂಡೆಸ್‌ರ ಜೊತೆಯಲ್ಲಿ ಕರ್ನಾಟಕದ ವಿದ್ವಾಂಸರಿಗೆ ಪಾಠ ಹೇಳಿದ್ದಾರೆ. ರಾಮಾನುಜನ್ನರ ಕಾರ್ಯ ತತ್ಪರತೆಗೆ, ಶಿಸ್ತಿಗೆ 'ಗಾದೆಗಳು' (೧೯೫೫) ಎಂಬ ಸಣ್ಣ ಕೃತಿಯೇ ಸಾಕ್ಷಿ. 'ಅನದರ್ ಹಾರ್ಮೋನಿ' (೧೯೮೬) ಎಂಬ ಗ್ರಂಥವನ್ನು ಸ್ಟುವರ್ಟ್ ಬ್ಲಾಕ್ ಬರ್ನ್ ಮತ್ತು ರಾಮಾನುಜನ್ ಸೇರಿ ಸಂಗ್ರಹಿಸಿದರು. 'ಫೋಕ್ ಟೇಲ್ಸ್ ಫ್ರಂ ಇಂಡಿಯಾ' (೧೯೯೦) ಗ್ರಂಥದಲ್ಲಿ ಭಾರತದ ೨೨ ಭಾಷೆಗಳಿಂದ ಆಯ್ದ ೧೦೫ ಜನಪದ ಕತೆಗಳನ್ನು ಇಂಗ್ಲಿಷಿಗೆ ಅನುವಾದಿಸಿಕೊಟ್ಟಿದ್ದಾರೆ.

೧೯೫೫ರಲ್ಲಿ ರಾಮಾನುಜನ್ನರ 'ಗಾದೆಗಳು' ಎಂಬ ಹೆಸರಿನ ಕಿರುಪುಸ್ತಕ ಪ್ರಕಟವಾಯಿತು. ಕರ್ನಾಟಕ ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲೆಗೆಂದು ಈ ಕೃತಿಯನ್ನು ಬರೆದರು. ಸುಮಾರು ೯೦ ಪುಟದ ಈ ಪುಟ್ಟ ಪುಸ್ತಕದಲ್ಲಿ ಗಾದೆಗಳನ್ನು ಕುರಿತ ಅತ್ಯಮೂಲ್ಯವಾದ ಮಾಹಿತಿಗಳಿವೆ. ಒಂದು ಉದ್ಗ್ರಂಥಕ್ಕೆ ಆಗಿ ಮಿಗುವಷ್ಟು ವಿಷಯಗಳನ್ನು ಸಂಗ್ರಹಿಸಿ ಅದಕ್ಕೊಂದು

ವಿಶ್ಲೇಷಣಾತ್ಮಕ ಪೀಠಿಕೆ ರಚಿಸಿಕೊಂಡಿದ್ದಾರೆ. “ಗಾದೆಗಳನ್ನು ಓದುವವರಿಲ್ಲ. ಗಾದೆಗಳ ಮೇಲೆ ಪುಸ್ತಕ ಬರೆದವನೇ ಮೂರ್ಖತನಕ್ಕೆ ಅಥವಾ ಶುಷ್ಕ ಪಾಂಡಿತ್ಯಕ್ಕೆ ಗುರಿಯಾಗುತ್ತಾನೆ'' – ಎಂಬ ಗಾದೆ ಮಾತಾದರೆ ಅಚ್ಚರಿ ಏನಿಲ್ಲ. ಪಾಶ್ಚಾತ್ಯ ದೇಶಗಳಲ್ಲಿಯೂ ಪಂಡಿತರು ಈ ಬಗ್ಗೆ ಪ್ರಸ್ತಾಪಿಸಿದ್ದುಂಟು. ಅಲ್ಲಿನ ಗಾದೆಗಳ ಸಂಕಲನಗಳು ಅಷ್ಟಿದ್ದರೂ ಅಲ್ಲಿನ ಪಂಡಿತರು – ಜನರಿಗೆ ಗಾದೆಗಳ ಬಗ್ಗೆ ಆದರವಿಲ್ಲ, ತಿಳುವಳಿಕೆಯೂ ಇಲ್ಲ. ಹೀಗೆಯೇ ಬಿಟ್ಟರೆ ಗಾದೆಗಳು ಜನಮನದಿಂದ ಅಳಿಸಿಹೋಗುತ್ತವೆ'' – ಎಂದು ಆಕ್ಷೇಪಿಸುತ್ತಾರೆ. ಈ ಕೃತಿಯಲ್ಲಿ ಗಾದೆಯ ರೂಪರಚನೆಗಳನ್ನು ಕುರಿತಂತೆ ಸಾಮಾನ್ಯ ಪರಿಚಯವಿದೆ. ಜೊತೆಗೆ ಕೆಲವು ಕನ್ನಡ ಗಾದೆಗಳ ವಿಶ್ಲೇಷಣೆಯೂ ಇದೆ. ಕರ್ನಾಟಕದಲ್ಲಿ ಅದುವರೆಗೆ ಗಾದೆಗಳ ಬಗೆಗೆ ವೈಜ್ಞಾನಿಕ ಅಧ್ಯಯನ ಆಗಿರಲಿಲ್ಲ. ಆ ಸಂದರ್ಭದಲ್ಲಿ ಗಾದೆಗಳ ಕುರಿತು ವಿಶ್ಲೇಷಣಾತ್ಮಕ ಚರ್ಚೆ ಮಾಡಿರುವುದು ಮಹತ್ವದ ಸಂಗತಿಯಾಗಿದೆ. ಈ ಕೃತಿ ತುಂಬಾ ಸೊಗಸಾಗಿ, ಸರಳವಾಗಿ, ಓದಿಸಿಕೊಂಡು ಹೋಗುತ್ತದೆ. ಇಲ್ಲಿ ರಾಮಾನುಜನ್ನರ ಅಧ್ಯಯನದ ಒಳನೋಟವನ್ನು ಕಾಣಬಹುದು. ಪ್ರಪಂಚದ ಹಲವಾರು ಭಾಷೆಗಳಲ್ಲಿ ಬರುವ ನೂರೆಂಟು ಗಾದೆಗಳನ್ನು ಆರಿಸಿ, ಜೋಡಿಸಿ ವಿಶ್ಲೇಷಿಸಿದ ಬಗೆ ಅನನ್ಯವಾದುದು. ಕನ್ನಡದಲ್ಲಂತೂ ನಾವು ಕೇಳದಿರುವ ಎಷ್ಟೋ ರಸಮಯ ವಿಚಾರ ಪ್ರಚೋದಕ ಗಾದೆಗಳನ್ನು ಪ್ರಪಂಚದ ನಾನಾ ಗಾದೆಗಳೊಂದಿಗೆ ಹೋಲಿಸಿ ವಿವೇಚಿಸಿದ್ದಾರೆ.

**ಹಂಚಿ – ಎ ಕನ್ನಡ ಸಿಂಡರೆಲಾ** (೧೯೮೩) ಎಂಬ ಲೇಖನದಲ್ಲಿ ಕನ್ನಡದ ಸಿಂಡರೆಲಾ ಕತೆಯ ಕುರಿತಂತೆ ವಿಶ್ಲೇಷಣೆಯಿದೆ. ಇಲ್ಲಿ ಸಿಂಡರೆಲಾ ಕಥೆಯ ವರ್ಗ ( ಎಟಿ – 510) ಮತ್ತು ಆಶಯ ಸೂಚಿಗಳನ್ನು ಗುರುತಿಸಿದ್ದಾರೆ. ಮತ್ತು ಈ ಕತೆಯ ರಾಚನಿಕ ವಿಶ್ಲೇಷಣೆ ಮಾಡಿದ್ದಾರೆ. ಕಾಳಿದಾಸನ ಶಾಕುಂತಲ ಕೃತಿಯ ಕತೆಗೂ ಮತ್ತು ಸಿಂಡರೆಲಾ ಜನಪದ ಕತೆಗೂ ಸಮಾನ ಆಶಯ ಕಂಡುಬರುತ್ತದೆ. ಈ ರೀತಿಯಲ್ಲಿ ಸಮಾನ ಆಶಯಗಳನ್ನು ತೌಲನಿಕವಾಗಿ ಅಧ್ಯಯನಿಸಿದ್ದಾರೆ. ಪುರಾಣ ಕತೆಗಳ, ಕಾವ್ಯಗಳ ಆಧಾರದ ಮೇಲೆ ವಿಶ್ಲೇಷಣೆ ಮಾಡಿದ ಅವರ ಇನ್ನೊಂದು ಪ್ರಮುಖ ಲೇಖನ **ದಿ ಇಂಡಿಯನ್ ಓಡಿಪಸ್** (೧೯೮೩). ೧೯೬೩ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಳ್ಳಿಯೊಂದರಲ್ಲಿ ಸಂಗ್ರಹ ಮಾಡಿದ ಕತೆಯ ವಿವರದ ಮೂಲಕ ಭಾರತದಲ್ಲಿ ತಾಯಿ–ಮಗನ ಮಧ್ಯೆ ಲೈಂಗಿಕ ಸಂಬಂಧದ ನಿಷೇಧವನ್ನು ಸಾರುವ ಕತೆಗಳು ಸಿಗುತ್ತವೆ ಎನ್ನುತ್ತಾರೆ. ಯೂರೋಪಿನ ಅನೇಕ ರಾಷ್ಟ್ರಗಳಲ್ಲಿ ತಾಯಿ–ಮಗನ ಮಧ್ಯೆ ಲೈಂಗಿಕ ಸಂಬಂಧದ ನಿಷೇಧವಿದೆ. (ವರ್ಗ : ಎಟಿ 931) ಗ್ರೀಕ್ ಪುರಾಣದಲ್ಲಿಯೂ ಈ ರೀತಿಯ ನಿಷೇಧಾತ್ಮಕ ಅಂಶಗಳನ್ನು ಗಮನಿಸಬಹುದು.

**ಅನದರ್ ಹಾರ್ಮೋನಿ** (೧೯೮೬) ಕೃತಿಯಲ್ಲಿ ರಾಮಾನುಜನ್ನರು ಬರೆದ ‘ಟು ರೆಲ್ಮ್ಸ್ ಆಫ್ ಕನ್ನಡ ಫೋಕ್‌ಲೋರ್’ ಎಂಬ ಲೇಖನವಿದೆ. ಈ ಲೇಖನವು ಜನಪದ ಕತೆ, ಜನಪದ ಕತೆ ಮತ್ತು ಪುರಾಣ, ಜನಪದ ಪುರಾಣ ಮತ್ತು ಶಿಷ್ಟ ಪುರಾಣಗಳು (ಗ್ರಾಮ ದೇವತೆಗಳನ್ನು ಕುರಿತಂತೆ), ಜನಪದ ಆಚರಣೆಗಳು ಮತ್ತು ಆಚರಣಾತ್ಮಕ ಪ್ರದರ್ಶನಗಳ ಕುರಿತಂತೆ ಇದೆ. ಕನ್ನಡದ ಜನಪದ ಹಾಡು, ಕತೆಗಳನ್ನು ವಿಶ್ಲೇಷಣೆಯ ಹಂತದಲ್ಲಿ ಉದಾಹರಣೆಯಾಗಿ ಬಳಸಿಕೊಳ್ಳುತ್ತಾರೆ. ತಮಿಳು ಸಂಗಂ ಸಾಹಿತ್ಯದಲ್ಲಿ ಬಳಕೆಗೊಂಡ ಅಗಂ – ಪುರಂ ಪರಿಕಲ್ಪನೆಯನ್ನು ಕನ್ನಡ ಜಾನಪದಕ್ಕೆ ಪರಿಚಯಿಸುತ್ತಾರೆ. ಆ ಮೂಲಕ ಕನ್ನಡದ ‘ವರತ್ ಕತಾವು’ ಅಗಂ ಎಂದೂ ದಕ್ಷಿಣ ಕನ್ನಡದಲ್ಲಿ ಪ್ರಚಲಿತವಿರುವ ‘ಸಿರಿಕತೆ’ಯು ಪುರಂ ಎಂದೂ ಹೇಳುತ್ತಾರೆ. ಹೀಗೆ ಜನಪದ

ಕತೆಯೊಂದನ್ನು ಹೇಳುವುದಕ್ಕೂ ಅಥವಾ ಹಾಡೊಂದನ್ನು ಹೇಳುವುದಕ್ಕೂ ಸಂದರ್ಭಗಳು ಮುಖ್ಯವಾಗುತ್ತವೆ. ಒಂದು ನಿರ್ದಿಷ್ಟ ಸಂದರ್ಭದಲ್ಲಿ ಕತೆಯೊಂದನ್ನು ಹೇಳುವಾಗ ನಿಷೇಧವಿರುತ್ತದೆ. ಉದಾಹರಣೆಗೆ ಆರಾಧನೆಗೆ ಸಂಬಂಧಿಸಿದ ಕತೆಯನ್ನು ಮನೆಯೊಳಗೆ ಹೇಳುವುದು ನಿಷೇಧ. ಕನ್ನಡ ಜಾನಪದವನ್ನು ಅರ್ಥಮಾಡಿಕೊಳ್ಳಲು ಇದು ಹೊಸ ಚೌಕಟ್ಟನ್ನು ಒದಗಿಸಿಕೊಡುತ್ತದೆ. ಈ ಕೃತಿಯಲ್ಲಿ ಒಂಭತ್ತು ಲೇಖನಗಳಿದ್ದು, ಅವೆಲ್ಲವೂ ಭಾರತೀಯ ಜಾನಪದ ಕ್ಷೇತ್ರವನ್ನು ಅವಲೋಕಿಸಿ ಬರೆದಂತಹವುಗಳು.

**ಫೋಕ್ ಟೇಲ್ಸ್ ಫ್ರಂ ಇಂಡಿಯಾ (೧೯೯೦)** ಗ್ರಂಥದಲ್ಲಿ ಭಾರತದ ೨೨ಭಾಷೆಗಳ ಜನಪದ ಕಥೆಗಳಿವೆ. ಇದರ ಪ್ರಸ್ತಾವನೆಯ ಮೊದಲ ಮಾತೇ ಹೀಗೆ: "ಇಂಡಿಯಾದ ಸಂಸ್ಕೃತಿಯನ್ನು ಯಾರಾದರೂ ಅಭ್ಯಾಸ ಮಾಡಬೇಕಾದರೆ, ಕೇವಲ ಬರೆಹದ ಪರಂಪರೆಯನ್ನಲ್ಲ, ಜಾನಪದವಿರುವ ಮೌಖಿಕ ಪರಂಪರೆಯನ್ನು ಅಧ್ಯಯನ ಮಾಡಬೇಕು". ಭಾರತದ ೨೨ ಭಾಷೆಗಳಿಂದ ಸುಮಾರು ಮೂರು ಸಾವಿರಕ್ಕೂ ಹೆಚ್ಚು ಜನಪದ ಕತೆಗಳನ್ನು ಸಂಗ್ರಹಿಸಿದ್ದ ರಾಮಾನುಜನ್, ತಮ್ಮ ದೃಷ್ಟಿಯಲ್ಲಿ ಅತ್ಯುತ್ತಮ ಅನ್ನಿಸಿದ ೧೧೫ ಕತೆಗಳನ್ನು ಇಲ್ಲಿ ಆಯ್ದುಕೊಟ್ಟಿದ್ದಾರೆ. ವಿಶ್ವದಾದ್ಯಂತ ಜಾನಪದ ಅಧ್ಯಯನಕ್ಕೆ ಈ ಕತೆಗಳಿಂದ ದೊರಕುವ ನೆರವು ಅಷ್ಟಿಷ್ಟಲ್ಲ. ಲಿಪಿಯೇ ಇಲ್ಲದ ಎಷ್ಟೋ ಭಾಷೆಗಳು ಎಷ್ಟೋ ವರ್ಷಗಳಿಂದ ಗಳಿಸಿಕೊಂಡಿರುವ ಶ್ರೀಮಂತವಾದ ಪರಂಪರೆಯನ್ನು ಹೊರ ಜಗತ್ತಿಗೆ ಭಾರತದ್ದೆಂದು ತೋರಿಸಿಕೊಟ್ಟರು. ನಾಗಾ, ಗೊಂಡಿ, ಸಂತಾಲಿ, ಕೋಟಾ ಮುಂತಾಗಿ ಹಲವು ಬುಡಕಟ್ಟು ಜನಾಂಗದ ಕತೆಗಳೇ ಇಲ್ಲಿ ಎದ್ದು ಕಾಣುತ್ತವೆ. ಅಲ್ಲದೆ ಕನ್ನಡದ ಜೊತೆಯಲ್ಲಿ ತುಳು ಕತೆಗಳಿವೆ. ಇದು ಒಂದು ಸಂಸ್ಕೃತಿಯನ್ನು ಬಹುಮುಖಿ ರೂಪದಲ್ಲಿ ಗ್ರಹಿಸುತ್ತಿದ್ದ ರಾಮಾನುಜನ್‌ರ ಅಧ್ಯಯನಕ್ಕೆ ನಿದರ್ಶನ. ಒಂದು ಅರ್ಥದಲ್ಲಿ ಪಾಶ್ಚಾತ್ಯರಿಗೆ ಮತ್ತು ಭಾರತೀಯರಿಗೆ ಭಾರತದಲ್ಲಿ ಹಲವು ಭಾರತಗಳಿವೆ. ಭಾರತದೊಳಗೆ ಹಲವು ಸಂಸ್ಕೃತಿಗಳಿವೆ ಎಂಬುದನ್ನು ಮನದಟ್ಟು ಮಾಡುವ ಪ್ರಯತ್ನವಿದು.

ರಾಮಾನುಜನ್ ತಮ್ಮ ೨೦–೨೫ನೆಯ ವಯಸ್ಸಿನ ಸುಮಾರಿನಲ್ಲಿ ಜನಪದ ಕತೆಗಳನ್ನು ಕ್ರಮಬದ್ಧವಾಗಿ ಅವರಿವರ ಅಜ್ಜಿಯರಿಂದ ಸಂಗ್ರಹಿಸಲು ಆರಂಭಿಸಿದರು. ನಂತರ ಪ್ರಪಂಚದ ಎಲ್ಲ ಕತೆಗಳಲ್ಲೂ ಪುನರಾವರ್ತನೆಗೊಳ್ಳುವ ಆಶಯ, ವರ್ಗಸೂಚಿಗಳ ಪರಿಚಯ ಮಾಡಿಕೊಂಡರು. ಹೀಗೆ ವೈಜ್ಞಾನಿಕವಾಗಿ ಆರಂಭಗೊಂಡ ಇವರ ಅಧ್ಯಯನ ಕ್ರಮ ಈ ಸಂಕಲನದ ೧೧೫ ಕತೆಗಳ ಆಯ್ಕೆಗೂ ಮಾರ್ಗದರ್ಶನವಾಯಿತು. ಹಾಗಾಗಿ ಕತೆಯೊಂದನ್ನು ಸಂಗ್ರಹಿಸುವಾಗ ಕತೆ ಹೇಳಿದವರು ಯಾರು ? ಸ್ಥಳ ಯಾವುದು ? ದೇಶ ಯಾವುದು ? ಈ ರೀತಿ ಸಂದರ್ಭಕ್ಕೆ ಹೆಚ್ಚು ಒತ್ತು ಕೊಡುತ್ತಾರೆ.

ಹೀಗೆ ದಕ್ಷಿಣ ಭಾರತದ ಜಾನಪದ ಸಾಹಿತ್ಯ ಇಂಗ್ಲಿಷಿಗೆ ಭಾಷಾಂತರವಾದ ಮೇಲೆ ಪಶ್ಚಿಮದವರಿಗೆ ಒಂದು ಹೊಸ ಲೋಕದ ಪರಿಚಯವಾಯಿತು. ಭಾರತವೆಂದರೆ ಉಪನಿಷತ್ತು, ವೇದ, ಭಗವದ್ಗೀತೆ ಎಂದು ಭಾವಿಸಿದ್ದ ಪಶ್ಚಿಮದವರಿಗೆ ಇದರಿಂದ ಬೇರೆಯಾದ ಒಂದು ಲೋಕ ಇಷ್ಟು ಸಂಪದ್ಭರಿತವಾಗಿದೆಯೆಂದು ತಿಳಿದೇ ಇರಲಿಲ್ಲ. ಇಲ್ಲಿಯ ರೀತಿ – ನೀತಿ, ಕಲ್ಪನೆ, ನಡೆ –

ನುಡಿಯೇ ಬೇರೆಯೆಂಬುದನ್ನು ಅಧ್ಯಯನಿಸುವುದಕ್ಕೆ 'ಫೋಕ್ ಟೇಲ್ಸ್ ಫ್ರಂ ಇಂಡಿಯಾ' ಒಂದು ಆಕರ ಗ್ರಂಥವಾಯಿತು.

ಗಿರೀಶ್ ಕಾರ್ನಾಡ್ ಈ ಸಂಕಲನವನ್ನು ಕುರಿತಂತೆ ಈ ರೀತಿ ಅಭಿಪ್ರಾಯಪಡುತ್ತಾರೆ: 'ಜನಪದ ಕತೆಗಳನ್ನು ಹೇಳುವವರು ಹೆಚ್ಚಾಗಿ ಮುದುಕಿಯರು. ಮಕ್ಕಳಿಗೆ ಊಟ ಮಾಡಿಸುವಾಗ ಅಥವಾ ನಿದ್ರೆ ಮಾಡಿಸುವಾಗ ಈ ಕತೆಗಳನ್ನು ಹೇಳುತ್ತಾರೆ. ಕತೆಗಳನ್ನು ಹೇಳುವಾಗ ಸುತ್ತ – ಮುತ್ತ ಇರುವವರೂ ಹೆಂಗಸರೇ. ಕತೆಗಳನ್ನು ಮಕ್ಕಳಿಗೆ ಹೇಳಿದರೂ ಇವು ಮನೆಯ ಹೆಂಗಸರೊಳಗಿನ ಸಂವಹನ ಮಾಧ್ಯಮವಾಗಿವೆ. ನಾನು ಚಿಕ್ಕಂದಿನಲ್ಲಿ ಕೇಳುತ್ತಿದ್ದ ಕತೆಗಳು ನೆನಪಿವೆ. ಆಯ್ಕೆ ಮಾಡಿದ ಕತೆಗೂ ಆ ದಿನ ಮನೆಯಲ್ಲಿ ನಡೆದ ಘಟನೆಗೂ ಸಂಬಂಧವಿರುತ್ತಿತ್ತು.'' 'ನಾನು ನನ್ನ ನಾಟಕ ಮತ್ತು ಸಿನಿಮಾಗಳ ವಸ್ತುಗಳಿಗಾಗಿ ರಾಮಾನುಜನ್‌ರ ಜನಪದ ಕತೆಗಳ ಸಂಗ್ರಹವನ್ನು ನಾಚಿಕೆಯಿಲ್ಲದೆ ಸೂರೆಮಾಡಿದ್ದೇನೆ'. ನನ್ನ ಹಿಂದೀ ಚಲನಚಿತ್ರ 'ಚೆಲುವಿ'ಗೂ ಮೂಲ ವಸ್ತು, 'ನಾಗಮಂಡಲ'ಕ್ಕೂ ಪ್ರೇರಣೆ ರಾಮಾನುಜನ್ ಸಂಗ್ರಹಿಸಿದ ಕತೆಯೇ ಆಗಿದೆ.'' (ಎ.ಕೆ. ರಾಮಾನುಜನ್: ನೆನಪಿನ ಸಂಪುಟ: ೧೯೯೩ : ೧೧೧ – ೧೧೨)

ಭಾರತೀಯ ಸಂಸ್ಕೃತಿಯನ್ನು ಗಾಢವಾಗಿ ಹಚ್ಚಿಕೊಂಡು, ಬರಹದಲ್ಲಿ ಕಾಣಸಿಗದ ಕತೆಗಳ, ಗಾದೆಗಳ, ಜೋಕುಗಳ ಅನಿರ್ದಿಷ್ಟ ನಿಯಮಗಳ ಆಗರವೆಂದು ನೋಡುವ ರಾಮಾನುಜನ್‌ರ ಯೋಚನಾ ಕ್ರಮ ಸಂಸ್ಕೃತಿಯ ವಿವಿಧ ಮಜಲುಗಳ ಮೇಲೆ ಬೆಳಕು ಚೆಲ್ಲುತ್ತದೆ. ''ಇಂದು ಸಂಸ್ಕೃತಿ ಪ್ರಸಾರದ ಉತ್ಸಾಹ ಅನೇಕರ ಮನಸ್ಸನ್ನು ಮಿಡಿಯುತ್ತಿದೆ. ಅದರೊಂದಿಗೆ, ಜನತೆಯ ಹೃದಯದಲ್ಲಿ ಅರಗಿ, ರಕ್ತಗತವಾಗಿ ನುಡಿಯುವ ಸಂಸ್ಕೃತಿಯನ್ನು ಸ್ಮರಿಸಬೇಕಾಗಿದೆ. ಅಭಿಮಾನಿಯಾದ ಕಾವಿನೊಂದಿಗೆ ಅರಿವಿನ ಬೆಳಕನ್ನು ಮೆರೆಸಬೇಕಾಗಿದೆ'' (ಗಾದೆಗಳು : ೧೯೫೫ : ೯೦). ಈ ನಿಟ್ಟಿನಲ್ಲಿ ವಿದೇಶಿ ವಿದ್ವಾಂಸರು ಭಾರತದ ಮಹಾಪರಂಪರೆಯ ಗ್ರಂಥಗಳನ್ನು ಮಾತ್ರವಲ್ಲದೆ, ಕನ್ನಡ, ತಮಿಳಿನಂಥ ಪ್ರಾದೇಶಿಕ ಭಾಷೆಗಳ ಕೃತಿಗಳನ್ನು ಜನಪದ ಸಾಹಿತ್ಯವನ್ನು ಗಮನಿಸುವಂತೆ ಮಾಡಿದ್ದು ರಾಮಾನುಜನ್‌ರ ಸಾಧನೆಗಳಲ್ಲೊಂದು.

**ಅನುವಾದ ಕೃತಿಗಳು**

ವಿಮರ್ಶಕರೊಬ್ಬರು ಹೇಳಿರುವಂತೆ, ರಾಮಾನುಜನ್ ಒಬ್ಬ ಸೃಜನಶೀಲ ಭಾಷಾಂತರಕಾರರಂತೆ. ಎರಡು ಭಾಷೆ, ಎರಡು ದೇಶ, ಎರಡು ಸಂಸ್ಕೃತಿಗಳನ್ನು ಒಟ್ಟಿಗೆ ತರಲು ರಾಮಾನುಜನ್ ಬಳಸಿದ ಸಾಧನವೆಂದರೆ ಅನುವಾದ. ಬಂಗಾಳಿ, ಹಿಂದಿ, ತಮಿಳು, ತೆಲುಗು, ಕನ್ನಡ – ಇತ್ಯಾದಿ ಭಾಷೆಗಳಲ್ಲಿ ಶ್ರೀಮಂತ ಸಾಹಿತ್ಯ ಇದೆಯೆಂದು ತಮ್ಮ ಅಧ್ಯಯನ ಕ್ರಮದ ಮೂಲಕ ಅಮೇರಿಕನ್ನರಿಗೆ ತೋರಿಸಿಕೊಟ್ಟಿದ್ದಾರೆ. 'ಹಳದಿಮೀನು' (೧೯೬೬), 'ಸ್ಪೀಕಿಂಗ್ ಆಫ್ ಶಿವ' (೧೯೭೩), 'ಫೋಕ್ ಟೇಲ್ಸ್ ಫ್ರಂ ಇಂಡಿಯಾ' (೧೯೯೦), 'ದ ಇಂಟೀರಿಯರ್ ಲ್ಯಾಂಡ್‌ಸ್ಕೇಪ್' (೧೯೬೭) 'ಹಿಮ್ಸ್ ಫಾರ್ ದ ಡ್ರೌನಿಂಗ್' (೧೯೮೧), 'ಪೊಯಮ್ಸ್ ಆಫ್ ಲವ್ ಅಂಡ್ ವಾರ್' (೧೯೮೫) 'ಸಂಸ್ಕಾರ' (೧೯೭೬) ಮೊದಲಾದ ಅನುವಾದಗಳು ರಾಮಾನುಜನ್‌ರ ಸೃಜನಶೀಲ ಭಾಷಾಂತರಕ್ಕೆ ನಿದರ್ಶನಗಳು.

**ಹಳದಿ ಮೀನು** ರಾಮಾನುಜನ್ನರ ಪ್ರಸಿದ್ಧ ಅನುವಾದಗಳಲ್ಲಿ ಒಂದು. ಶೌರಿಯವರ ಇಂಗ್ಲಿಷ್ ಕಾದಂಬರಿ ಮೂಲದಲ್ಲಿ ಪ್ರಕಟವಾಗುವ ಮುಂಚೆಯೇ 'ಹಳದಿ ಮೀನು' ಅನುವಾದದಲ್ಲಿ ಪ್ರಸಿದ್ಧಿ ಪಡೆಯಿತು. ಹಳದಿ ಮೀನು ಕಾದಂಬರಿಯು ಪತ್ರಕರ್ತನೊಬ್ಬನ ದುರಂತ ಬದುಕನ್ನು ಕುರಿತದ್ದಾಗಿದೆ. ಅವನು ಎಗ್ಸಿಸ್ಟೆಂಟಾಲಿಸ್ಟ್ ಜಾತಿಯ ಬುದ್ಧಿಜೀವಿ. ವೃತ್ತಿಯಲ್ಲಿ ಪತ್ರಕರ್ತ, ಅವನ ಕಛೇರಿಗೆ ಅವಳು ಪತ್ರಿಕೋದ್ಯಮದ ತರಬೇತಿಗಾಗಿ ಬರುತ್ತಾಳೆ. ಪರಿಚಯದ ಹಂತದಲ್ಲೇ ಕಾಣಿಸಿಕೊಳ್ಳುವ ಆಕರ್ಷಣೆ ಇಬ್ಬರನ್ನೂ ಹತ್ತಿರ ತರುತ್ತದೆ. ಇಬ್ಬರೂ ತಮ್ಮ ವಿಚಾರಗಳಿಂದ ಪರಸ್ಪರ ಕಲಕುತ್ತಾರೆ. ಆದರೆ ಅವನಿಗೆ ವಿವಾಹದಂತಹ ಕೌಟುಂಬಿಕ ವ್ಯವಸ್ಥೆಯಲ್ಲಿ ಅವಳಷ್ಟೇ ಸುಲಭವಾಗಿ ರಾಜಿಮಾಡಿಕೊಳ್ಳಲಾಗದು. ಕೊನೆಗೆ ಒಂದು ದಿನ ಅವನು ೩೩ನೆಯ ವಯಸ್ಸಿನಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ರಾಮಾನುಜನ್‌ರ ಇನ್ನೊಂದು ಶ್ರೇಷ್ಠ ಅನುವಾದ ಕೃತಿ **'ಸ್ಪೀಕಿಂಗ್ ಆಫ್ ಶಿವ'** (೧೯೭೩). ಇಲ್ಲಿ ನಾಲ್ಕು ಜನ ವಚನಕಾರರ ವಚನಗಳ ಆಯ್ದ ಭಾಗಗಳನ್ನು ಇಂಗ್ಲಿಷಿಗೆ ಅನುವಾದಿಸಲಾಗಿದೆ. ಅಲ್ಲಮ ಪ್ರಭು, ದೇವರ ದಾಸಿಮಯ್ಯ, ಬಸವಣ್ಣ ಮತ್ತು ಅಕ್ಕಮಹಾದೇವಿ ಇವರೇ ಅಲ್ಲಿನ ಪ್ರಮುಖರು. ಮೂಲದಲ್ಲಿ ಓದಿದಾಗ ಕಂಡು ಬಾರದಿದ್ದ ಅನೇಕ ಹೊಸ ಅರ್ಥಗಳು ಅನುವಾದಗೊಂಡ ನಂತರದಲ್ಲಿ ಅನೇಕರಿಗೆ ಆಶ್ಚರ್ಯವನ್ನು ತಂದುಕೊಟ್ಟಿತು. 'ಉಳ್ಳವರು ಶಿವಾಲಯವ ಮಾಡುವರು' (ಬಸವಣ್ಣ) 'ತೆರಣಿಯ ಹುಳು' (ಅಕ್ಕಮಹಾದೇವಿ) ಮೊದಲಾದ ವಚನಗಳು ರಾಮಾನುಜನ್ ಅನುವಾದದ ಕುಲುಮೆಯಲ್ಲಿ ಧ್ವನ್ಯಾರ್ಥವನ್ನು ಪಡೆದುಕೊಂಡವು. ಈ ರೀತಿ ಸ್ಪೀಕಿಂಗ್ ಆಫ್ ಶಿವ ಒಂದು ಕ್ರಾಂತಿಯನ್ನೇ ಮಾಡಿತು. ೮೦೦ ವರ್ಷಗಳು ಹಿಂದೆ ಮೂರನೇ ದೇಶದ ಪ್ರಾಂತೀಯ ಭಾಷೆಯೊಂದು ಮುಟ್ಟಿದ ಎತ್ತರವನ್ನು ಇಂಗ್ಲಿಷ್ ಮಾತನಾಡುವ ದೇಶಗಳಿಗೆ ಮನಗಾಣಿಸಿತು. ಈ ಕೃತಿಯನ್ನು ಆಧರಿಸಿ ಬಿ.ಬಿ.ಸಿ.ಯು ಒಂದು ಅಪೇರಾ ಕಾರ್ಯಕ್ರಮವನ್ನು ಪ್ರಸಾರ ಮಾಡಿತು. ಅನೇಕ ಗಾಯಕರಿಗೆ ಮತ್ತು ನರ್ತಕರಿಗೆ ಅವರ ಅನುವಾದ ಕೃತಿ ಮಾಧ್ಯಮದ ವಸ್ತುವಾಗಿ ಒದಗಿತು. ಹೀಗೆ ರಾಮಾನುಜನ್ನರ ಅನುವಾದಗಳಿಗೆ ಪಾಶ್ಚಾತ್ಯರಲ್ಲಿ ಅನಿರೀಕ್ಷಿತ ಬೆಂಬಲವೊಂದು ವ್ಯಕ್ತವಾಯಿತು.

**ದ ಇಂಟೀರಿಯರ್ ಲ್ಯಾಂಡ್‌ಸ್ಕೇಪ್** (೧೯೬೭) ಪ್ರಾಚೀನ ತಮಿಳು ಸಂಗಂ ಸಾಹಿತ್ಯದಿಂದ ಆಯ್ದ ಭಾಗಗಳ ಅನುವಾದವನ್ನೊಳಗೊಂಡಿದೆ. **ಹಿಮ್ಸ್ ಫಾರ್ ದ 'ಡ್ರೌನಿಂಗ್'** (೧೯೮೧) ನಲ್ಲಿ ನಮ್ಮಾಳ್ವರ್ ಅವರ ಕೆಲವು ಕೃತಿಗಳು (ತಿರುವೈಮೊಳಿ) ಅನುವಾದಗೊಂಡಿವೆ. **ಪೋಯಮ್ಸ್ ಆಫ್ ಲವ್ ಆ್ಯಂಡ್ ವಾರ್** (೧೯೮೫) ನಲ್ಲಿ ಪ್ರಾಚೀನ ತಮಿಳಿನ ಕಾವ್ಯಭಾಗಗಳ ಅನುವಾದವಿದೆ. ಎಂ. ಜಿ. ಕೃಷ್ಣಮೂರ್ತಿಯವರೊಡನೆ ಗೋಪಾಲಕೃಷ್ಣ ಅಡಿಗರ ಕೆಲವು ಕವನಗಳನ್ನು ಇಂಗ್ಲಿಷಿಗೆ **ಸಾಂಗ್ ಆಫ್ ಅರ್ಥ್ ಆ್ಯಂಡ್ ಅದರ್ ಪೋಯಮ್ಸ್** (೧೯೬೮) ಎಂಬುದಾಗಿ ಅನುವಾದಿಸಿದರು. ಯು. ಆರ್. ಅನಂತಮೂರ್ತಿಯವರ **ಸಂಸ್ಕಾರ** (೧೯೭೬) ಕಾದಂಬರಿಯನ್ನು ಇಂಗ್ಲಿಷಿಗೆ ಅನುವಾದಿಸಿದರು. ಈ ಅನುವಾದವೀಗ ಅಮೇರಿಕದ ಹಲವು ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕವಾಗಿದೆ. ಪುಸ್ತಕ ರೂಪದಲ್ಲಿ ಪ್ರಕಟವಾದ ಕೃತಿಗಳಲ್ಲದೆ ಇನ್ನೂ ಎಷ್ಟೋ ಬಿಡಿಬರಹಗಳನ್ನು ಅನುವಾದಿಸಿದ್ದಾರೆ. ಬೇರೆಯವರ ಜೊತೆ ಸೇರಿ ಇತರ ಭಾಷೆಗಳ ಹಲವು ಕವಿತೆಗಳನ್ನು ಇಂಗ್ಲಿಷಿಗೆ ಕೊಟ್ಟಿದ್ದಾರೆ.

# ವಿಮರ್ಶೆ

ಎ. ಕೆ. ರಾಮಾನುಜನ್‌ರ ಕವನ ಸಂಕಲನಗಳು, ಅನುವಾದಗಳು ಮತ್ತು ಜಾನಪದ ಅಧ್ಯಯನಗಳ ಬಗ್ಗೆ ಹಲವರು ವಿಮರ್ಶಕರು ಚರ್ಚಿಸಿದ್ದಾರೆ. ಕಾವ್ಯದ ವಸ್ತು, ಅವರು ಹೇಳುವ ಜೋಕ್‌ಗಳು, ಜೀವನಾನುಭವದ ಘಟನೆಗಳು ಮತ್ತು ಅವರ ಬದುಕಿನ ರೀತಿ ಕನ್ನಡಕ್ಕೆ, ಕನ್ನಡಿಗರಿಗೆ ಹೊಸ ಚಿಂತನೆಯನ್ನು ಒದಗಿಸಿಕೊಟ್ಟಿದೆ. ರಾಮಾನುಜನ್ನರ ಕೃತಿಗಳಲ್ಲಿ ಅತೀ ಹೆಚ್ಚು ವಿಮರ್ಶೆಗೆ ಒಳಗಾಗಿರುವುದು ಅವರ ಕವನ ಸಂಕಲನಗಳು. ಅವರ ಕಾವ್ಯದ ಬಗೆಗೆ ಪರ ಮತ್ತು ವಿರೋಧ ರೀತಿಯ ಚರ್ಚೆಗಳು ನಡೆದಿವೆಯಾದರೂ ಹೆಚ್ಚಿನವರೆಲ್ಲಾ ಅವರ ಕಾವ್ಯವನ್ನು, ಕಾವ್ಯದ ಶೈಲಿಯನ್ನು ಮೆಚ್ಚಿಕೊಂಡು ಬರೆದಿರುವುದೇ ಜಾಸ್ತಿ.

೧. ಎಚ್.ಎಸ್. ಶಿವಪ್ರಕಾಶ್ ಹೇಳುವಂತೆ, "೨೦ನೆಯ ಶತಮಾನದ ಕನ್ನಡ ಕಾವ್ಯದಲ್ಲಿ ತಾಂಡವವಾಡುತ್ತಿರುವ (ಬೇಂದ್ರೆ – ಕಂಬಾರರನ್ನು ಹೊರತುಪಡಿಸಿ) ಮಾತ್ರಾ ಛಂದಸ್ಸಿನ ದಬ್ಬಾಳಿಕೆಯನ್ನು ಮುರಿದ ಅವರ ಕಾವ್ಯದಲ್ಲಿ ಬಗೆದು ನೋಡುವ ಚೂಪು ನೋಟವಿದೆ. ಅಲುಗಿನಂತೆ ಹರಿತವಾದ ಮಾತಿದೆ. ಬುದ್ಧಿಯ ಮೂಲಕ ಹುಡುಕುವವರಿಗೆ ಮರಳಿ ಮರಳಿ ಜಾನಿಸುವ ರೀತಿ ತೆರೆದುಕೊಳ್ಳುವ ಅರ್ಥಗಳಿವೆ. ಜೈವಿಕ ಶಕ್ತಿಯ ವಿಪರ್ಯಾಸಗಳನ್ನು ತಡಕಿನೋಡುವ ಹುದುಗಿದ ಲೋಕದೃಷ್ಟಿಯಿದೆ........ ಬಹುತೇಕವಾಗಿ ಡೋಂಗಿ ಕಾವ್ಯವೇ ಹೆಚ್ಚಾಗಿರುವ ಭಾರತೀಯ ಕಾವ್ಯದಲ್ಲಿ ರಾಮಾನುಜನ್ನರು ತಮ್ಮದೇ ಆದ ದನಿಯನ್ನು ಕಂಡುಕೊಂಡರು. ಹಾಗಾಗಿ ಇಂಗ್ಲಿಷ್ ಕಾವ್ಯ ಲೋಕದಲ್ಲಿ ಅವರಿಗೆ ಮನ್ನಣೆ ದೊರಕಿತು." (ಸಂಚಯ : ೧೯೯೩ : ೯–೧೦)

೨. "ರಾಮಾನುಜನ್ನರ ಕಾವ್ಯದಲ್ಲಿ ನೆನಪು ಮತ್ತೆ ಮತ್ತೆ ತಲೆ ಹಾಕುತ್ತದೆ. ಆದರೆ ಅದು ಸಾಂಪ್ರದಾಯಿಕ 'ಸ್ಮೃತಿ' ಅಲ್ಲ ಎಂಬ ಮುಖ್ಯ ಸಂಗತಿಯೇ ಅವರನ್ನು ಹೆಚ್ಚು ಸಮಕಾಲೀನರನ್ನಾಗಿ ಮಾಡಿದೆ. ಅವರ ಕಾವ್ಯ ಮಧ್ಯಮ ವರ್ಗದ ಬುದ್ಧಿಜೀವಿಯೊಬ್ಬನ ಕಾವ್ಯ. ಆದರೆ ವಸಾಹತುಗಳ ಮೂಲದ ಬುದ್ಧಿಜೀವಿಗಳಿಗೆ ಸುಲಭವಾಗಿ ಸಾಧ್ಯವಾಗುವ ಸಿದ್ಧಮಾನಸಿಕ ಸ್ಥಿತಿಗಳನ್ನು ರಾಮಾನುಜನ್ ಒಪ್ಪಿಕೊಂಡಿಲ್ಲ. ಕನ್ನಡ ನವ್ಯಕಾವ್ಯದ ಇತಿಹಾಸದಲ್ಲೇ ರಾಮಾನುಜನ್ನರಿಗೆ ವಿಶಿಷ್ಟ ಸ್ಥಾನವಿರುವುದು ಇದೇ ಕಾರಣಕ್ಕಾಗಿ" ಎಂಬುದಾಗಿ ಡಿ.ಆರ್. ನಾಗರಾಜ್ (೧೯೮೩ : ೧೫೬) ಅಭಿಪ್ರಾಯ ಪಟ್ಟಿರುತ್ತಾರೆ.

೩. ರಾಮಾನುಜನ್ ಅವರದ್ದು ತೀರಾ ಅಮೂರ್ತವಾದ ಕಾವ್ಯ. ಹಾಗಾಗಿ ಓದುಗರಿಂದಲೂ ಉಗ್ರವಾದ ಅಕ್ಷರ ನಿಷ್ಠೆಯನ್ನು ನಿರೀಕ್ಷಿಸುವ ಕಾವ್ಯ. ಈ ದೃಷ್ಟಿಯಿಂದ ರಾಮಾನುಜನ್ ಕಾವ್ಯದ ಕೆಲವು ಅನ್ಯ ಸಂಸ್ಕೃತಿಯ ವಿವರಗಳ ಪರಿಚಯವಿಲ್ಲದೇ ಹೋದರೆ ಆ ವಿವರಗಳು ಓದುಗನಿಗೆ ಏನನ್ನೂ ಧ್ವನಿಸದೇ ಹೋಗಬಹುದು. ಕೆಲವು ವಿವರಗಳಲ್ಲಿ ಸಾಪೇಕ್ಷತೆಯನ್ನು ಸೂಚಿಸುವ ಕ್ರಮ ಉದ್ದೇಶಪೂರ್ವಕವಾಗಿದೆ. ಏಕೆಂದರೆ ಇದು ರಾಮಾನುಜನ್ ಅವರ ಜೀವನ ದೃಷ್ಟಿಗೇ ನೇರವಾಗಿ ಸಂಬಂಧಿಸಿದ ಸಂಗತಿಯಾಗಿದೆ (ಸಂಚಯ : ೧೯೯೩ :೪) ಎಂದು ಡಿ.ಆರ್. ನಾಗರಾಜ್ ಅಭಿಪ್ರಾಯಿಸಿದ್ದಾರೆ.

೪. ಬಿ.ಸಿ. ರಾಮಚಂದ್ರ ಶರ್ಮ ಅವರು ಹೇಳುವಂತೆ, "ರಾಮಾನುಜನ್, ಕನ್ನಡ ಕವಿಗಳಿಗೆ, ನವ್ಯ ಯುಗದ ಹುಬ್ಬು ಗಂಟಿಕ್ಕಿದ ಕಾವ್ಯಕ್ಕೆ ಪೂರ್ತಿ ಭಿನ್ನವಾದ ಒಂದು ಮಾದರಿಯನ್ನು ಒದಗಿಸಿದರು ಎಂಬುದನ್ನು ಒಪ್ಪಿಕೊಳ್ಳಲೇ ಬೇಕು. ಕವಿಗಳ ಒಂದು ತಲೆಮಾರೇ ಅವರ ಪ್ರಭಾವಕ್ಕೆ ಒಳಗಾಗಿದೆ." (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೩ : ೪೬:೪೭)

೫. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರು, "ರಾಮಾನುಜನ್ನರ ಕವಿತೆ ಓದುವಾಗ ಅವರು ಮಾತು ಬಳಸುವ ರೀತಿಗೆ ವಿಶೇಷ ಲಕ್ಷ್ಯಕೊಡಬೇಕು. ಇಲ್ಲದಿದ್ದಲ್ಲಿ ಆರಂಭದಿಂದ ಕೊನೆಯವರೆಗೆ ಇಡೀ ಕವನದ ಮೇಲೆ ಸಲೀಸು ಜಾರಿಹೋಗುವ ಅಪಾಯವಿರುತ್ತದೆ." "ರಾಮಾನುಜನ್ ತನ್ನ ಕಾವ್ಯವೊಂದರಲ್ಲಿ ಹೀಗೆ ಹೇಳಿಕೊಂಡಿದ್ದಾರೆ. 'ಕವಿ ನಿರಂತರತೆಯ ಪ್ರವಾಹದಲ್ಲಿ ಮೀನು ಹಿಡಿಯಲು ಕೂತ ಬೆಸ್ತನಂತೆ.' ಕೆಲವರಿಗೆ ಆಯುಷ್ಯವಿಡೀ ಕೂತರೂ ಯಾವ ಅನುಭವವನ್ನೂ ಬಲೆಯಿಂದ ಎತ್ತಲಾಗುವುದಿಲ್ಲ. ರಾಮಾನುಜನ್ ಅದೃಷ್ಟವಂತರು. ಅವರು ಗಾಳ ಎಸೆದದ್ದೇ ಕಡಿಮೆ. ಆದರೆ ಎಸೆದಾಗಲೆಲ್ಲಾ ಬಹುಮಟ್ಟಿಗೆ ಕವಿತೆ ಅವರ ಬುಟ್ಟಿ ಸೇರಿದೆ " (ಸಾಪ್ತಾಹಿಕ ಪುರವಣಿ : ೧೯೯೩) ಎಂದು ಅಭಿಪ್ರಾಯಪಟ್ಟಿರುತ್ತಾರೆ.

೬. ಕೀರ್ತಿನಾಥ ಕುರ್ತಕೋಟಿಯವರು, "ರಾಮಾನುಜನ್ನರ ಕವಿತೆಯನ್ನು ತಿಳಿದುಕೊಳ್ಳಬೇಕಾದರೆ ಅವರು ಮತ್ತೆ ಮತ್ತೆ ಹೇಳುತ್ತಿದ್ದ ಚೀನಿ ಗಾದೆಯೊಂದರ ರೀತಿಯನ್ನು ಅನುಸರಿಸಬೇಕು. ಆ ಗಾದೆಯೆಂದರೆ ಕಿತ್ತಳೆ ಹಣ್ಣಿನ ಸುಗ್ಗಿಯ ಕಾಲದಲ್ಲಿ ಕಿತ್ತಳೆ ಮರವೊಂದರಲ್ಲಿನ ಹಣ್ಣುಗಳನ್ನು ಎಣಿಸಬಹುದು. ಆದರೆ ಕಿತ್ತಳೆ ಹಣ್ಣೊಂದರಲ್ಲಿನ ಕಿತ್ತಳೆ ಮರಗಳನ್ನು ಎಣಿಸಲು ಸಾಧ್ಯವೇ ? ರಾಮಾನುಜನ್ ಅವರ ಒಂದೊಂದು ಕವಿತೆಯ ಹಿಂದೆ ಯಾವ ಯಾವ ಕವಿತೆಗಳಿವೆ ಎನ್ನುವುದು ತಿಳಿದರೆ ಅವರ ಕಾವ್ಯ ತನ್ನ ಅರ್ಥವನ್ನು ಬಿಟ್ಟುಕೊಡುತ್ತದೆ. ರಾಮಾನುಜನ್ ಕಾವ್ಯದ ಅರ್ಥವನ್ನು ಅರಿತುಕೊಳ್ಳಲು ನಮ್ಮ ವಿಮರ್ಶಕರು ಇಂಥ ಹಣ್ಣಿನೊಳಗಿನ ಗಿಡಗಳನ್ನು ಎಣಿಸಲು ಕಲಿಯಬೇಕಾಗಿದೆ." (ಸಂವಾದ :೧೯೯೩) ಎಂದಿದ್ದಾರೆ.

"ರಾಮಾನುಜನ್‌ರ ತಮಿಳು ಕವಿತೆಗಳ ಭಾಷಾಂತರಗಳ ಎರಡು ಸಂಪುಟಗಳಲ್ಲದೆ ಒಂದು ಸ್ವತಂತ್ರ ಕವನ ಸಂಗ್ರಹವನ್ನೂ ಇಂಗ್ಲಿಷಿನಲ್ಲಿ ಪ್ರಕಟಿಸಿದ್ದಾರೆ. ಇಂಗ್ಲಿಷಿನಲ್ಲಿ ಅವರು ಬರೆದಿರುವ ಕಾವ್ಯ ಇಂದು ಇಂಗ್ಲಿಷಿನಲ್ಲಿ ಬರೆಯುತ್ತಿರುವ ಯಾವುದೇ ಭಾರತೀಯ ಕವಿಯ ಕಾವ್ಯಕ್ಕಿಂತ ಮೇಲು ಮಟ್ಟದ್ದಾಗಿದೆ. ತಮಿಳು ಸಂಗಂ ಕವಿಗಳ ಮತ್ತು ಕನ್ನಡ ವಚನಕಾರರ ಪ್ರಭಾವವೇ ರಾಮಾನುಜನ್‌ರ ಇಂಗ್ಲಿಷ್ ಕಾವ್ಯದ ಶ್ರೇಷ್ಠತೆಗೆ ಕಾರಣವಾಗಿದೆ" (ನವ್ಯ ಕಾವ್ಯ ಪ್ರಯೋಗ : ೧೯೭೫ :೧೩೮) ಎಂಬುದಾಗಿ ಕುರ್ತಕೋಟಿಯವರು ಹೆಮ್ಮೆ ಪಟ್ಟಿದ್ದಾರೆ.

ರಾಮಾನುಜನ್‌ರ 'ಹೊಕ್ಕುಳಲ್ಲಿ ಹೂವಿಲ್ಲ' (೧೯೬೯), '...ಮತ್ತು ಇತರ ಪದ್ಯಗಳು' (೧೯೭೭), ಮತ್ತು 'ಕುಂಟೋಬಿಲ್ಲೆ' (೧೯೯೦) ಕವನ ಸಂಕಲನಗಳ ಕುರಿತಂತೆ ಕುರ್ತಕೋಟಿಯವರು ಈ ರೀತಿ ಅಭಿಪ್ರಾಯಪಡುತ್ತಾರೆ. "ರಾಮಾನುಜನ್‌ರ ಮೂರು ಕನ್ನಡ ಕವನ ಸಂಕಲನಗಳಲ್ಲಿ ಬಂದಂತಹ ಕಾವ್ಯ ೨೦ನೆಯ ಶತಮಾನದ ನಮ್ಮ ಭಾರತೀಯ ತಲ್ಲಣಗಳಿಂದ ತಪ್ಪಿಸಿಕೊಂಡು ಅವುಗಳಿಂದ ಪಾರಾಗಿ ಮೂಡಿಬಂದಂತಹ ಕಾವ್ಯ. ಇವರ ಈ ಕಾವ್ಯದೊಳಗೆ ಎಲ್ಲಿಯೂ ಒಂದು ಕಡೆಗೂ 'ಗಾಂಧಿ' ಎನ್ನುವ ಶಬ್ದ ಕಂಡಿಲ್ಲ. ಈ ಶಬ್ದ ಬರಲೇ ಬೇಕೆಂದಿಲ್ಲ. ಆದರೆ ಗಾಂಧಿಯನ್ನು

ನೋಡಿದಂತಹ ಕವಿ, ಗಾಂಧಿಯನ್ನು ಅನುಭವವಾಗಿ ಹೊಂದಿದ ಕವಿ ಚಂದ್ರನ ಬಗ್ಗೆ ಬರೆದರೂ ಅದು ಗಾಂಧಿಯನ್ನು ನೋಡದೇ ಇರುವವನು ಚಂದ್ರನ ಬಗ್ಗೆ ಬರೆದ ಕವಿತೆಗಿಂತ ಭಿನ್ನವಾಗಿರುತ್ತದೆ. ನಾನು ಏನು ಹೇಳುತ್ತಿದ್ದೇನೆಂದರೆ, ೩೦ ವರ್ಷಗಳಿಗಿಂತಲೂ ದೀರ್ಘ ಕಾಲ ಈ ದೇಶ ಬಿಟ್ಟು ಹೋಗಿದ್ದರಿಂದಲೋ ಏನೋ ರಾಮಾನುಜನ್ ಈ ದೇಶದ ಇತಿಹಾಸದಲ್ಲಿ ಏನೇನು ಆತಂಕಗಳು ಬಂದವೋ ಅವುಗಳಿಂದ ಮತ್ತು ನಮಗೆ ಸಮಕಾಲೀನವಾಗಿದ್ದ ನಮ್ಮ ದೇಶದಲ್ಲಿನ ತಳಮಳಗಳಿಂದ ಪಾರಾಗಿ ಉಳಿದರು. ಇಂಥದ್ದರಿಂದ ಪಾರಾಗಿ ಹೋದ ರಾಮಾನುಜನ್ ಭಿನ್ನವಾದ ಸಂವೇದನೆಯ ನೆಲೆಯಲ್ಲಿ ಕವಿತೆ ಬರೆದದ್ದರಿಂದ ಬಹುಶಃ ನಮ್ಮ ವಿಮರ್ಶಕರಿಗೆ ಇವು ವಿಕ್ಷಿಪ್ತವೆನಿಸಿರಬಹುದು'' (ಸಂವಾದ : ೧೯೯೩).

ಆದರೆ "ರಾಮಾನುಜನ್ನರ ಕಾವ್ಯದ ಬಗ್ಗೆ ಹೆಚ್ಚಿನ ತಿಳುವಳಿಕೆ ಬೇಕಾಗಿದ್ದರೆ ಒಂದು ಮಾತನ್ನು ನೆನಪಿನಲ್ಲಿಡುವುದು. ಹೊಕ್ಕುಳಲ್ಲಿ ಹೂವಿಲ್ಲ ಸಂಕಲನದಲ್ಲಿಯ ಕವನಗಳನ್ನೆಲ್ಲ ಬಿಡಿ ಬಿಡಿಯಾಗಿ ನೋಡಿ, ಅಭ್ಯಾಸ ಮಾಡಿ ಬೆಲೆ ಕಟ್ಟುವುದಕ್ಕಿಂತ ಅವನ್ನೆಲ್ಲ ಒಂದೇ ಕಾವ್ಯದ ಹಲವು ಅಂಗಗಳೆಂದು ನೋಡುವುದು ಹೆಚ್ಚು ಅಪೇಕ್ಷಣೀಯವಾಗಿದೆ. "ಹೊಕ್ಕುಳಲ್ಲಿ ಹೂವಿಲ್ಲ' ಎಂಬುದೇ ಆ ದೊಡ್ಡ ಕವಿತೆಯ ಹೆಸರು. ಕುಮಾರ ವ್ಯಾಸನ ಕಾವ್ಯದಿಂದ ಕಡ ತೆಗೆದುಕೊಂಡಿರುವ ಈ ಹೆಸರು, ರಾಮಾನುಜನ್‌ರ ಕಾವ್ಯದ ಅನುಭವದ ರೂಪೂ ಸಾಮಾನ್ಯವಾದದ್ದು, ಶೈಲಿ ಸಾಮಾನ್ಯವಾದದ್ದು ಎಂದು ಸೂಚಿಸುತ್ತದೆ. ರಾಮಾನುಜನ್‌ರ ಕಾವ್ಯ ಎಂದೂ ಸಾಮಾನ್ಯ ಅನುಭವದ ಮೂರ್ತತೆಯನ್ನು ಮೀರಿ ಹೋಗುವುದಿಲ್ಲ. ಅದರಲ್ಲಿಯ ಉತ್ಕಟತೆ, ಉದ್ರೇಕಗಳಿಗೆ ಅವಕಾಶವಿಲ್ಲ. ಹೊಕ್ಕುಳ – ಹೂವು ಅತಿಮಾನವತ್ವವನ್ನು ಊರ್ಧ್ವಗಾಮಿತ್ವವನ್ನು ಸೂಚಿಸುತ್ತದೆ. ಅದೆಲ್ಲ ತಮ್ಮ ಕಾವ್ಯಕ್ಕೆ ಬೇಡ ಎಂಬ ಉದ್ದೇಶಕ್ಕಾಗಿಯೋ ಏನೋ ರಾಮಾನುಜನ್ ತಮ್ಮ ಸಂಕಲನಕ್ಕೆ ಈ ಹೆಸರು ಕೊಟ್ಟಿದ್ದಾರೆ'' (ನವ್ಯಕಾವ್ಯ ಪ್ರಯೋಗ : ೧೯೭೫). ಅವರ "ಹೊಕ್ಕುಳಲ್ಲಿ ಹೂವಿಲ್ಲ' ಕಾವ್ಯದ ವಿಷಯ ಸಾಮಗ್ರಿಯಲ್ಲಿ ವೈವಿಧ್ಯ ಕಂಡು ಬರುತ್ತದೆಯಾದರೂ ಪ್ರತಿಯೊಂದು ಕವಿತೆಯ ವಸ್ತುವೂ ಕವಿ ಹೇಳಬೇಕೆಂದಿರುವ ಮುಖ್ಯ ವಸ್ತುವಿನೊಂದಿಗೆ ಸಂಬಂಧವನ್ನಿಟ್ಟುಕೊಂಡಿವೆ. ಕಾವ್ಯದ ಮುಖ್ಯ ವಸ್ತು ಸ್ವಲ್ಪ ಇಡಿಯಾಗಿ, ಕೈಯಳತೆಗೆ ಸಿಗುವುದು 'ತೆಗೆದರೆ ಬಾಗಿಲು', 'ನಲವತ್ತರ ನೆರಳು', 'ಪತ್ರೆ' 'ಕಾರಣ', 'ತಿರುಗಿ ಬಂದೆ' ಮುಂತಾದ ಕವನಗಳಲ್ಲಿ ಹುಟ್ಟಿನಿಂದ ಭಾರತೀಯನಾಗಿ ಈಗ ಅಮೇರಿಕೆಯಲ್ಲಿ ನೆಲೆಸಿರುವ ಕವಿ ಕಾವ್ಯವನ್ನು ತನ್ನಿಂದಲೇ ಪ್ರಾರಂಭಿಸಿರುವುದು ಬಹಳ ಸ್ವಾಭಾವಿಕವಾಗಿದೆ. ತನ್ನ ವ್ಯಕ್ತಿತ್ವಕ್ಕೂ ಸುತ್ತಲಿನ ಜೀವನಕ್ಕೂ ಸಜೀವ ಸಂಬಂಧವಿರುವ ಕವಿ, ಸುತ್ತಲಿನ ಜೀವನದೊಂದಿಗೆ ಸಮರಸವಾಗಿಯೋ, ಇಲ್ಲವೇ ಅದರೊಂದಿಗೆ ಬಂಡೆದ್ದೋ ಒಟ್ಟು ತನ್ನ ಮತ್ತು ಜನಜೀವನದ ಸಂಬಂಧದ ಬಗ್ಗೆ ಬರೆಯಬಲ್ಲ. ಪರಕೀಯ ಪ್ರಜ್ಞೆ, ಬೇರಿಲ್ಲದಿರುವಿಕೆ ಇವು ರಾಮಾನುಜನ್‌ರ ಮೂಲ ಅನುಭವಗಳಾಗಿದ್ದರೂ ಕೂಡ, ಆ ಶಬ್ದಗಳು ಈಗ 'ಕ್ಲೀಷೆ'ಗಳಾಗಿರುವುದರಿಂದ ರಾಮಾನುಜನ್‌ರ ಕಾವ್ಯವನ್ನು ಕುರಿತು ಆ ಮಾತುಗಳನ್ನಾಡಲು ಅನುಮಾನವಾಗುತ್ತದೆ. ಯಾಕೆಂದರೆ ಈ ಅನುಭವಗಳ ವಿಭಾವಗಳಾದ ಆಕ್ರೋಶ, ಅಳುಬರುಕುತನ, 'ಸಿನಿಕ'ತನಗಳು ರಾಮಾನುಜನ್ ಅವರಲ್ಲಿ ಇಲ್ಲ. ಈ ಅನುಭವಗಳ ಅನೇಕ ನೆಲೆಗಳನ್ನು ಈ ಸಂಗ್ರಹದಲ್ಲಿ ಅವರು ಕಾಣಿಸಿದ್ದಾರೆ'' (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೩ : ೬೭).

೭. ಪಿ. ಲಂಕೇಶ್ ಅವರು 'ಟೀಕೆ ಟಿಪ್ಪಣಿ'ಯಲ್ಲಿ ಹೀಗೆ ಹೇಳಿದ್ದಾರೆ. " ಕನ್ನಡದ ಆಡು ಭಾಷೆ, ನುಡಿಕಟ್ಟು ಆಚರಣೆ, ಚಿತ್ರಗಳನ್ನು – ಆಡು ಭಾಷೆ ಮಾತ್ರವಲ್ಲ, ಆಡುವ ಶೈಲಿಯಲ್ಲೇ ಬರೆದುಬಿಡುವ ರಾಮಾನುಜನ್ ಕವಿತೆಗಳಲ್ಲಿ ಛಂದಸ್ಸಿಲ್ಲ, ಪ್ರಾಸವಿಲ್ಲ, ಪ್ರಕಾರವಿಲ್ಲ, ತೀವ್ರತೆಯಿಲ್ಲ ಇತ್ಯಾದಿಯಾಗಿ ಗೊಣಗುವ ಕನ್ನಡ ಪದ್ಯಕಾರರೊಬ್ಬರಿಗೆ ರಾಮಾನುಜನ್ ಉತ್ತರಿಸಿದ್ದು ಹೀಗೆ. ಜ್ವರ ಬಂದಂತೆ ಮೈಮರೆತು ತೀವ್ರವಾಗಿ ಕಂದವೃತ್ತದಲ್ಲಿ ಕಾವ್ಯ ಬರೆಯುವವರನ್ನು ನೋಡಿದ್ದೇನೆ.... ಅದರಲ್ಲಿ ಕಂದವಿರುತ್ತದೆಯೇ ಹೊರತು ಕಾವ್ಯವಿರುವುದಿಲ್ಲ.'' (೧೯೯೦:೬೧೫). ''ರಾಮಾನುಜನ್ ತಮ್ಮ ಎಸಳುಗಳನ್ನು ಸೇರಿಸುವ ರೀತಿ ಕುಸುರಿ ಕೆಲಸವಾಗಿ ಕೆಲವರಿಗೆ ಕಂಡೀತು. ಆದರೆ ಈ ಕುಸುರಿ ಕೆಲಸಕ್ಕೆ ಅನ್ನಿಸಿಕೆಯ ಒತ್ತಡವಿದೆ. 'ವಲಸೆ ಬಂದ ಕಾಡು', 'ಪಂಚ ಭೂತಗಳಲ್ಲಿ ಒಂದು', 'ಕಲೆ ಮತ್ತು ಜೀವನ ಸೌಂದರ್ಯ', 'ಅಜ್ಞಾತ ಪರ್ವದಲ್ಲಿ ಬೃಹನ್ನಳೆ' – ಮುಂತಾದ ಪದ್ಯಗಳು ಈ ದೃಷ್ಟಿಯಿಂದ ಅಭ್ಯಾಸಕ್ಕೆ ತಕ್ಕವಾಗಿವೆ. 'ಹೊಕ್ಕುಳಲ್ಲಿ ಹೂವಿಲ್ಲ' ಎಂಬ ಹೆಸರೇ ಸೂಚಿಸುವಂತೆ ರಾಮಾನುಜನ್ ನಾಯಕನ ಹಂಗು ತೊರೆದ ಕವಿ. ನಮ್ಮ ಆಂಟಿ – ಹೀರೋ ಕಾಲದ ಅನುಭವಗಳನ್ನು ಸಮರ್ಥವಾಗಿ ಹೇಳಲೆತ್ನಿಸಿರುವ ರಾಮಾನುಜನ್ ಕೃತಿಗಳ ನಾಯಕ ಎಂದೂ ಗಂಟಲೆತ್ತಿ ಚೀರುವುದಿಲ್ಲ'' (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೪ : ೫೫).

೮. " ರಾಮಾನುಜನ್ ಹರಟೆಯ ಮೂಲಕ ಕಾವ್ಯ ಪ್ರವೇಶ ಮಾಡುತ್ತಾರೆ. ಮುಂದೆ ಸರಿಯುತ್ತಾ ಸರಿಯುತ್ತಾ ವ್ಯಂಗ್ಯ, ವಿಡಂಬನೆಯ ಸೀಮೆಯನ್ನು ಸೇರುತ್ತಾರೆ. 'ಅಜ್ಞಾತ ಪರ್ವದಲ್ಲಿ ಬೃಹನ್ನಳೆ', 'ಅಂಗುಲ ಹುಳುವಿನ ಪರಕಾಯ ಪ್ರವೇಶ' – ಇದಕ್ಕೆ ಉತ್ತಮ ನಿದರ್ಶನ. ಅವರ ಕಾವ್ಯದಲ್ಲಿ ವಸ್ತುವೇ ಹೆಚ್ಚು ಜೀವಂತವಾಗಿದ್ದು, ಕವಿ ನಿರ್ಲಿಪ್ತವಾಹಕ ಮಾತ್ರವಾಗಿರುತ್ತಾನೆ. ಈ ದೃಷ್ಟಿಯಲ್ಲಿ 'ಹೊಕ್ಕುಳಲ್ಲಿ ಹೂವಿಲ್ಲ' ಉಳಿದೆಲ್ಲಾ ಕಾವ್ಯಗಳಿಗಿಂತ ಬೇರೆಯೂ ನಿಜವಾದ ಅರ್ಥದಲ್ಲಿ ಹೆಚ್ಚು ನಿಷ್ಠವೂ ಆಗಿದೆ. ಬದುಕಿನ ವಿವಿಧ ಕ್ಷೇತ್ರಗಳಲ್ಲಿನ ಅಸಂಗತೆಯನ್ನು ಗುರುತಿಸುತ್ತಾ ಅವುಗಳ ನಡುವೆ ಅರ್ಥಪೂರ್ಣತೆಯನ್ನು ಹುಡುಕುವುದು ಮತ್ತು ಈ ಹುಡುಕಾಟವನ್ನು ತದ್ವತ್ತಾಗಿ ಕಾವ್ಯವಾಗಿಸುವುದು ರಾಮಾನುಜನ್ನರ ಮುಖ್ಯ ಕಾಳಜಿಯಾಗಿದೆ (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೪ : ೭೨).

೯. ಬಿ. ಟಿ. ದೇಸಾಯಿಯವರು ರಾಮಾನುಜನ್ನರ ಕಾವ್ಯಗಳನ್ನು ಅರ್ಥಮಾಡಿಕೊಂಡಿರುವುದು ಹೀಗೆ. ''ರಾಮಾನುಜನ್ನರ ಪದ್ಯವನ್ನು ಮಾತನಾಡಿದಂತೆಯೇ ಓದಬೇಕು – ಹಾಡಬಾರದು. ರಾಮಾನುಜನ್ ಒಬ್ಬರೇ ಈ ರೀತಿಯ ಕಾವ್ಯ ಬರೆದಿದ್ದಾರೆಯೆಂದಲ್ಲ. ಪಂಪ, ಕುಮಾರವ್ಯಾಸರಿಂದ ಹಿಡಿದು ಬೇಂದ್ರೆ, ಅಡಿಗರವರೆಗೂ ಈ ಕಾವ್ಯ ಹರಿದು ಬಂದಿದೆ. ಆದರೆ ಅವರು ಮಾತನಾಡುವ ಮತ್ತು ಹಾಡುವ ಪದ್ಯಗಳೆರಡನ್ನು ಸೇರಿಸಿಯೇ ಬರೆದಿದ್ದಾರೆ. ಆದ್ದರಿಂದ ಅದನ್ನು ಹೇಗೆ ಓದಿದರೂ ಪದ್ಯವಾಗುತ್ತದೆ. ಇವರಿಗೆ ಭಾಷಣದ, ಮಂತ್ರದ ಧಾಟಿ ಪ್ರಮುಖವಾಗಿದ್ದರೆ ರಾಮಾನುಜನ್ ರೀತಿಯ ಕಾವ್ಯಕ್ಕೆ ಹರಟೆಯ ಧಾಟಿ ಮುಖ್ಯವಾಗುತ್ತದೆ. ಕುಳಿತು ಸಹಜ ಹರಟೆ ಹೊಡೆಯುವ ಧಾಟಿಯಲ್ಲಿ ರಾಮಾನುಜನ್ನರನ್ನು ಓದಿದರೆ ಅವರ ಪದ್ಯದ ಸವಿ ಹತ್ತುತ್ತದೆ. ಏಕೆಂದರೆ ಸಂಭಾಷಣೆ ಅಥವಾ ಹರಟೆಯೇ ಅವರ ಕಾವ್ಯದ ಜೀವಾಳ. ರಾಮಾನುಜನ್‌ರ ಒಂದೊಂದು ಕವನವನ್ನು ಒಂದೊಂದು ತುಣುಕು ಹರಟೆಯೆಂದು ಓದಬಹುದು. ಆದರೆ ರಾಮಾನುಜನ್‌ರ ಕಾವ್ಯದಲ್ಲಿ ಕಂಡು ಬರುವ ಒಂದು ವಿಶೇಷ ಸೊಬಗೆಂದರೆ ಅನುಭವದ ಬಗೆಗೆ ಅವರಿಗಿರುವ

ನಿಸ್ಸಂಕೋಚ ದೃಢತೆಯಾಗಿದೆ (ಎ.ಕೆ. ರಾಮಾನುಜನ್: ನೆನಪಿನ ಸಂಪುಟ ೧೯೯೩ :೫೭) ಎಂದು ಟೀಕಿಸಿದ್ದಾರೆ.

೧೦. ಪಾ.ಲ. ಸುಬ್ರಹ್ಮಣ್ಯ ಅವರು, "ರಾಮಾನುಜನ್ನರ ಪ್ರತಿಭೆ ಕೇವಲ ವೈಚಾರಿಕತೆಯ ಮಟ್ಟದಲ್ಲಿಯೇ ಕೆಲಸ ಮಾಡುತ್ತಿದೆ. ಕಾವ್ಯಾನುಭವ ಜೀವನಾನುಭವದಂತೆ ದೈಹಿಕ ವಾಸ್ತವತೆಯನ್ನು ಪಡೆಯಬೇಕೆಂಬ ನಿರೀಕ್ಷೆ ಉಳ್ಳವರಿಗೆ ಹಾಗನಿಸುವುದು ಸ್ವಾಭಾವಿಕ'' (ಸಾಕ್ಷಿ ೧೯೭೦ – ಸಂ.೯) ಎಂದು ಟೀಕಿಸಿದ್ದಾರೆ.

೧೧. ಶಾಂತಿನಾಥ ದೇಸಾಯಿಯವರು ಹೇಳುವಂತೆ, ''ರಾಮಾನುಜನ್ನರ ಕಾವ್ಯ ಸದ್ಯದ ಕನ್ನಡ ನವ್ಯಕಾವ್ಯದ ಬೆಳವಣಿಗೆಯಲ್ಲಿ ಪ್ರಮುಖವಾದ ಮೈಲುಗಲ್ಲಾಗಿದೆ. ಕನ್ನಡ ಭಾಷೆಯ ಸುಪ್ತ ಶಕ್ತಿಗಳನ್ನು ಕಂಡು ಹಿಡಿಯುವ ಕೆಲಸದಲ್ಲಿ, ಕನ್ನಡವನ್ನು ಒಂದು ಸೂಕ್ಷ್ಮವಾದ, ಸಮರ್ಥವಾದ ಕಾವ್ಯ ಭಾಷೆಯನ್ನಾಗಿ ಮಾರ್ಪಡಿಸುವ ಕೆಲಸದಲ್ಲಿ ರಾಮಾನುಜನ್ನರ ಕಾವ್ಯಕ್ಕೆ ಅತ್ಯಂತ ಮಹತ್ವದ ಪಾತ್ರವಿದೆ. ರಾಮಾನುಜನ್ನರ ಕಾವ್ಯದ ವೈಶಿಷ್ಟ್ಯವೇನೆಂದು ಒಂದೇ ಮಾತಿನಲ್ಲಿ ಹೇಳುವುದಾದರೆ, ಪ್ರಾಮುಖ್ಯವಾಗಿ ಪ್ರತಿಮೆಗಳನ್ನು, ಚಿತ್ರಗಳನ್ನು ಅತ್ಯಂತ ಕೌಶಲ್ಯದಿಂದ, ಸಮರ್ಪಕವಾದ ಸಂಯಮಿತವಾದ ಭಾಷೆಯಲ್ಲಿ, ಗದ್ಯಕ್ಕೆ ತೀರಾ ಸಮೀಪವಾದ ಹೊಸ ಬಗೆಯ ಲಯಗಳಲ್ಲಿ, ತೋರಿಕೆಗೆ ಸರಳವಾಗಿದ್ದರೂ ಅತ್ಯಂತ ಸೂಕ್ಷ್ಮವಾದ ಕಲಾತ್ಮಕವಾದ ರೀತಿಯಲ್ಲಿ, ಅರ್ಥದ ಅಂತಃಸ್ವರಗಳು ಹೊರಡುವಂತೆ ಧ್ವನಿಪೂರ್ಣವಾಗಿ ಚಿತ್ರಿಸುವುದು ಎಂದು ಹೇಳಬಹುದು. ಇಷ್ಟಿದ್ದಾಗ್ಯೂ, ಒಂದು ದೃಷ್ಟಿಯಿಂದ ಅವರ ಕಾವ್ಯ ಅತ್ಯಂತ ಸಮೀಪವಾಗಿದೆ. ಯಾಕೆಂದರೆ ಸತ್ಯ ಮನುಷ್ಯನ ಹೊರಗಿದ್ದ ವಸ್ತು ಪ್ರಪಂಚದಲ್ಲಿದ್ದಷ್ಟೇ ಅವನ ಒಳಗಿನ ಅನುಭವ ಪ್ರಪಂಚದಲ್ಲಿಯೂ ಇದೆ. ಅವನು ನಿರ್ಮಿಸುವ ಅರ್ಥ ಪ್ರಪಂಚದಲ್ಲಿಯೂ ಇದೆ. ಆದರೆ ರಾಮಾನುಜನ್ನರ ಪ್ರತಿಭೆ ಮಾತ್ರ ವಸ್ತು ಪ್ರಪಂಚ ಬಿಟ್ಟು ಹೊರಬರಲು ಹಿಂಜರಿಯುತ್ತದೆ. ಹೊಕ್ಕುಳಲ್ಲಿ ಹೂವರಳಿಸಲು ನಿರಾಕರಿಸುತ್ತದೆ'' (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೩ : ೫೦).

೧೨. ಟಿ. ಪಿ. ಅಶೋಕ್ ಅವರು ಹೇಳುವಂತೆ, "ರಾಮಾನುಜನ್ ಕಾವ್ಯದಲ್ಲಿ ಸಿನಿಕತನವಿಲ್ಲ. ಅದು ಮೈಪರಚಿಕೊಳ್ಳುವ ಕಾವ್ಯವೂ ಅಲ್ಲ. ರಾಮಾನುಜನ್ನರ ಜೀವ ಪ್ರೀತಿ ದೊಡ್ಡದು. ಆದರೆ ಅದು ಸೊಕ್ಕಿ ಹರಿಯುವುದಿಲ್ಲ. ಸ್ವಭಾವೋಕ್ತಿಯನ್ನು ಅವರು ವಿಪುಲವಾಗಿ ಬಳಸಿಕೊಳ್ಳುತ್ತಾರೆ. ಆದರೆ ರೆಟರಿಕನ್ನು ದೂರವಿಡುತ್ತಾರೆ'' (ಪುಸ್ತಕ ಪ್ರೀತಿ : ೧೯೯೩). " ಈ ಕವಿಯ ಪ್ರಜ್ಞೆ ಎಷ್ಟು ಸೂಕ್ಷ್ಮವಾದದ್ದೆಂದರೆ ಅದು ತನ್ನ ಖಾಸಗೀ, ವೈಯಕ್ತಿಕ ಜಗತ್ತಿನಲ್ಲಿ ಇಡೀ ವಿಶ್ವವನ್ನು ಕಾಣಬಲ್ಲುದು. ತಾನು ಕಂಡದ್ದು, ಕೇಳಿದ್ದು, ಅನುಭವಿಸಿದ್ದು, ಚಿಂತಿಸಿದ್ದು ಎಲ್ಲ ಆ ಕ್ಷಣದಲ್ಲಿ ಒಂದಾಗಿ ತನಗೂ ಇಡೀ ವಿಶ್ವಕ್ಕೂ ಅವಿಚ್ಛಿನ್ನ ಸಂಬಂಧ ಕಲ್ಪಿಸುವಂಥದ್ದು. ಯಶೋಧೆಯು ಬಾಲಕೃಷ್ಣನ ಬಾಯಲ್ಲಿ ವಿಶ್ವರೂಪ ಕಂಡಂತೆ ಎ.ಕೆ. ರಾಮಾನುಜನ್ ಕಾವ್ಯ. ಅದಕ್ಕೆ ಅರ್ಜುನನ ತಳಮಳಗಳಿಲ್ಲ. ಆದರೇನಂತೆ! ಯಶೋದೆಯ ವಿಶ್ವರೂಪ ದರ್ಶನ ಅರ್ಜುನನ ದರ್ಶನಕ್ಕಿಂತ ಭಿನ್ನವಾದದ್ದು ಅಷ್ಟೇ. ಇದು ಹೆಚ್ಚು ಕಡಿಮೆ ಪ್ರಶ್ನೆಯಲ್ಲ. ಹಾಗಾಗಿ ರಾಮಾನುಜನ್ ಅವರ ಮಾನವಶಾಸ್ತ್ರೀಯ ಪಾಂಡಿತ್ಯ, ವಿಸ್ತೃತವಾದ ವಿಶ್ವಸಾಹಿತ್ಯದ ಓದು, ಭಾರತದ ಭೂತ, ಅಮೇರಿಕನ್

ವರ್ತಮಾನ ಎಲ್ಲ ಒಂದು ಕ್ಷಣದಲ್ಲಿ ಒಂದಾಗಿ ಈ ಅಖಂಡ ಪ್ರಜ್ಞೆಯಲ್ಲಿ ತಮ್ಮ ವೈಯಕ್ತಿಕ ಅನುಭವವಾಗಿ ಅವರು ಕವನ ಕಟ್ಟುತ್ತಾರೆ. 'ಕುಂಟೋಬಿಲ್ಲೆ' ಸಂಕಲನದಲ್ಲಿ ರಾಮಾನುಜನ್ ಅವರ ರಾಜಕೀಯ ನಿಲುವುಗಳು ನೇರವಾಗಿ ಪ್ರಕಟವಾಗುವ ಹಲವು ರಚನೆಗಳಿವೆ. 'ಇರಾನಿನಲ್ಲಿ ಬರೆದಿರುವ ಪದ್ಯ', 'ಧ್ಯಾನ ಫಲಿಸಿದರೆ' ಈ ಕವನಗಳು ಆಧುನಿಕ ನಾಗರಿಕತೆಯ ದ್ವಂದ್ವವನ್ನು ಆಪ್ತವಾಗಿ ತಿಳಿಹಾಸ್ಯದೊಡನೆ ಮಂಡಿಸುವ ಕ್ರಮವಾಗಿದೆ.

'ಕುಂಟೋಬಿಲ್ಲೆ' ಕವನವು 'ಕುಂಟೋಬಿಲ್ಲೆ' ಆಟದಲ್ಲಿ ಒಂದು ಜೀವನ ದೃಷ್ಟಿಯನ್ನು ಹೊಳೆಯಿಸುವ ನೋಟ. ಹೊರಟಲ್ಲಿಗೇ ಬಂದು ಸೇರುವ ಅಂದರೆ, Cyclical ಚಲನೆಯ, ವರ್ತುಲ ಚಲನೆಯ ವಿನ್ಯಾಸವನ್ನು ಕಾಣಿಸುವಂಥದ್ದು. ಹಾಗಾಗಿ ಈ ಆಟವು ಬೇರೆ ಸಾಂಸ್ಕೃತಿಕ ಸಂದರ್ಭದಲ್ಲೂ ಕಾಣುವುದು ಕವಿಯ ಕುತೂಹಲಕ್ಕೆ ಕಾರಣವಾಗುತ್ತದೆ. ಇನ್ನೊಂದು ನೆಲೆಯಿಂದ ನೋಡಿದರೆ ಇದು ರಾಮಾನುಜನ್ ಅವರ ಆತ್ಮಚರಿತ್ರಾತ್ಮಕವಾದ ಕವನವಿರಬಹುದು. 'ಹಳೆಯದೊಂದು ಮತ್ತೆ ಮನೆಗೆ ಬಂದಾಗ', 'ನೆನ್ನೆ' 'ಒಳಗೆ', 'ತಿಳಿಯದ ಬಗ್ಗಡ', 'ಒಂದು ಕ್ಷಣ', 'ವರ್ತಮಾನ', 'ಸಂಶಯ ಭಕ್ತಿ' ಮೊದಲಾದ ಕವನಗಳಲ್ಲಿ ಒಂದು ರೀತಿಯ ಆತ್ಮಾವಲೋಕನ ಸ್ವ–ವಿಮರ್ಶೆ ಕಾಣುತ್ತದೆ. ಮೊದಲ ಎರಡು ಸಂಕಲನಗಳಲ್ಲಿ ಅಸ್ಪಷ್ಟವಾಗಿದ್ದ ಕಾಳಜಿಗಳು ಈ ಸಂಕಲನದಲ್ಲಿ ದಟ್ಟವಾಗಿ ರಾಮಾನುಜನ್ ತಮ್ಮ ವ್ಯಕ್ತಿತ್ವವನ್ನು ತೊಡಗಿಸಿಕೊಂಡು ಬರೆಯುತ್ತಿದ್ದಾರೆ ಅನ್ನಿಸುತ್ತದೆ'' (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೩ : ೬೨–೬೫) ಎಂದು ಹೇಳಿದ್ದಾರೆ.

೧೩. ರಹಮತ್ ತರೀಕೆರೆ ಅವರು ಹೇಳುವಂತೆ, "ರಾಮಾನುಜನ್ ಬರೆದ ಎರಡು ಕತೆಗಳಲ್ಲಿ ಒಂದಾದ 'ಅಣ್ಣಯ್ಯನ ಮಾನವಶಾಸ್ತ್ರ' ಅವರ ಪ್ರತಿಭೆಯನ್ನು ಗೊತ್ತು ಸನಾತನತೆಯನ್ನು ತಿರಸ್ಕರಿಸುವ ವಿಚಾರಶೀಲ ಮಾನವತಾವಾದಿ ನಿಲುವನ್ನು ಪ್ರಕಟಪಡಿಸುವ ಶ್ರೇಷ್ಠ ಸೃಷ್ಟಿಯಾಗಿದೆ.'' "ಭಾರತದ ನಿಜವಾದ ಸಂಸ್ಕೃತಿಯಿರುವುದು ಈ ದೇಶದ ಮೌಖಿಕ ಪರಂಪರೆಯಲ್ಲಿ ಎಂದು ಗಾಢವಾಗಿ ನಂಬಿ, ಅದರ ಸಾರಸತ್ವವನ್ನು ತಮ್ಮ ಜೋಳಿಗೆಯಲ್ಲಿ ತುಂಬಿಕೊಂಡು, ಜಗತ್ತನ್ನೆಲ್ಲ ಜೋಗಿಯಂತೆ ತಿರುಗುತ್ತಿದ್ದ ರಾಮಾನುಜನ್, ಭಾರತದ ಜಾನಪದ ಅಧ್ಯಯನಕ್ಕೆ ಒಂದು ವಿಸ್ತಾರವಾದ ಹಾಸನ್ನು ಸಿದ್ಧಗೊಳಿಸುತ್ತಿದ್ದರು. ಸಾಮಾಜಿಕವಾಗಿ ಮೇಲ್ತುದಿಯ ಶ್ರೇಣಿಗೆ ಸೇರಿದ, ನಗರದಲ್ಲಿ ಹುಟ್ಟಿಬೆಳೆದ, ಉದ್ಯೋಗಕ್ಕಾಗಿ ಅಮೇರಿಕೆಯ ಮಹಾನಗರವನ್ನು ಆಯ್ದುಕೊಂಡ, ಶಿಷ್ಟ ಅನುಭವಗಳ ನವ್ಯಲೇಖಕನೆನಿಸಿಕೊಡ ರಾಮಾನುಜನ್ ಜಾನಪದವನ್ನು ತಮ್ಮ ಕಾಳಜಿಯನ್ನಾಗಿ ನೆಲೆಯನ್ನಾಗಿ ಮಾಡಿಕೊಂಡರು''. ಆದರೆ "ರಾಮಾನುಜನ್ನರ ಆಸಕ್ತಿಯ ಅಧ್ಯಯನ ಕ್ಷೇತ್ರ ಭಾಷಾವಿಜ್ಞಾನ ವಾಗಿದ್ದರೂ, ಅವರು ಅಧ್ಯಯನಕ್ಕೆ ಗಂಭೀರವಾಗಿ ತೊಡಗಿಕೊಂಡದ್ದು ಜಾನಪದ ಕ್ಷೇತ್ರದಲ್ಲಿ. ನಮ್ಮ ಸಂಸ್ಕೃತಿಯ ದೇಸೀ ಮೂಲಗಳಿಗೆ ಹೋಗಿ ಅಲ್ಲಿ ಸಮುದಾಯದ ಪ್ರತಿಭೆಯನ್ನು, ಸೃಜನ ಶೀಲತೆಯನ್ನು ಅರಸತೊಡಗಿದರು. ನಿಜವಾದ ಇಂಡಿಯಾವನ್ನು, ಅದರ ಶಕ್ತಿ ಮತ್ತು ಸಾಂಸ್ಕೃತಿಕ ವೈವಿಧ್ಯವನ್ನು ಒಡಕಲು ದೇಹದ, ಕೀಚಲು ದನಿಯಲ್ಲಿ ಸಮರ್ಥವಾಗಿ ಮಂಡಿಸುತ್ತಿದ್ದರು'' (ಪುಸ್ತಕ ಮಾಹಿತಿ : ಜುಲೈ ೧೯೯೩).

# ರಾಮಾನುಜನ್ ಹೇಳುವ ಜೋಕ್‌ಗಳು

ರಾಮಾನುಜನ್ ಹೇಳುವ ಜೋಕ್‌ಗಳು ಅವರ ವ್ಯಕ್ತಿತ್ವಕ್ಕೆ ಕನ್ನಡಿಯಿದ್ದಂತೆ. ಭಾರತದ ಉಪಖಂಡದಲ್ಲಿ ತೀವ್ರವಾಗಿ ಹಬ್ಬುತ್ತಿರುವ ಎಲೆಕ್ಟ್ರಾನಿಕ್ ಮಾಧ್ಯಮವು ಮೌಖಿಕ ಪರಂಪರೆಯ ಮೇಲೆ ಹೇಗೆ ಪರಿಣಾಮ ಬೀರಿರಬಹುದು ಎಂಬುದರ ಕುರಿತು ರಾಮಾನುಜನ್ ಹೇಳಿದ ಜೋಕೊಂದು ಹೀಗಿದೆ. "ಒಬ್ಬ ಮನುಷ್ಯನ ಹತ್ತಿರ ತುಂಬಾ ಸಾಮರ್ಥ್ಯವುಳ್ಳ ಒಂದು ಕಂಪ್ಯೂಟರ್ ಇರುತ್ತದೆ. ಅದರಲ್ಲಿ ಭಾರೀ ಪ್ರಮಾಣದ ವಿಷಯಗಳನ್ನು ಆತ ಸಂಗ್ರಹಿಸಿರುತ್ತಾನೆ. ಆತ ಒಮ್ಮೆ ಕಂಪ್ಯೂಟರಿಗೆ 'ನೀನು ಮುಂದೆಯೆಂದಾದರೂ ಮನುಷ್ಯನ ರೀತಿಯಲ್ಲಿಯೇ ಯೋಚಿಸಬಹುದೇ ?' ಎಂದು ಕೇಳಿದಾಗ, ಸ್ವಲ್ಪ ಹೊತ್ತು ಒಂದಿಷ್ಟು ಲೆಕ್ಕಾಚಾರ ಮಾಡಿದ ಕಂಪ್ಯೂಟರ್ 'ಈ ಪ್ರಶ್ನೆ ನನಗೊಂದು ಕತೆಯನ್ನು ನೆನಪಿಗೆ ತರ‍್ತಾ ಇದೆ' ಎಂದು ಪರದೆಯ ಮೇಲೆ ಬರೆಯುತ್ತದೆ." (ಸಂಚಯ ೧೯೯೩, ಸಂಚಿಕೆ :೫–೧೭).

ಎಚ್.ಕೆ. ರಾಮಚಂದ್ರಮೂರ್ತಿಯವರು ರಾಮಾನುಜನ್ನರ ಜೋಕೊಂದನ್ನು ಹೀಗೆ ಹೇಳುತ್ತಾರೆ: "ಒಮ್ಮೆ ೧೯೫೨ರ ಬೇಸಿಗೆಯಲ್ಲಿ ಅವರೊಂದಿಗೆ ಬೆಳಗಾಂಗೆ ರೈಲಿನಲ್ಲಿ ಪ್ರಯಾಣ ಮಾಡಿದೆವು. ದಾರಿ ಉದ್ದಕ್ಕೂ ನಗುಮಾತಿನ ಸುರಿಮಳೆ. ರಾಮಾನುಜನ್ ಎಷ್ಟೇ ಹಗುರವಾಗಿ ಮಾತನಾಡಿದರೂ ಅದು ಸ್ವಾರಸ್ಯವಾಗಿರುತ್ತಿತ್ತು.... ಲಘುವಾದ ಮಾತಿನಲ್ಲಿ, ನಿಜವಾದ Wit ನ ವಿಚಾರದ ಹೂರಣ ಇರುತ್ತಿತ್ತು. ಒಮ್ಮೆ ಯಾರೋ ಒಬ್ಬ ಕುಖ್ಯಾತರ ಬಗ್ಗೆ ಮಾತನಾಡುವಾಗ 'ಆತನಿಗೆ ಯಾವ ನೀತಿ ನಿಯಮವಿಲ್ಲ.... ಆತನಿಗೆ ಹೆಣ್ಣಿನ ಖಯಾಲಿ ಹೆಚ್ಚು.....ಎಂದಾಗ ರಾಮಾನುಜನ್ 'Morality, to him means Mysore Sandal Soop' – ಎಂದರು. ಶುದ್ಧ ಪೋಲಿ ಎನ್ನಬಹುದಾದ ಈ ಮಾತಿನ ಅರ್ಥ ಹೊಳೆದು ನಾವೆಲ್ಲಾ ನಕ್ಕಾಗ ಅವರು "delayed action" ಎಂದರು" (ಎ.ಕೆ. ರಾಮಾನುಜನ್ : ನೆನಪಿನ ಸಂಪುಟ ೧೯೯೩ : ೬).

ವೈಯನ್‌ಕೆಯವರು ಹೀಗೆ ನೆನಪು ಮಾಡುತ್ತಾರೆ: "ಒಮ್ಮೆ ಸಭೆಯಲ್ಲಿ ರಾಮಾನುಜನ್ ಅವರನ್ನು ಜೋಕ್ ಹೇಳಲು ಕೋರಿದರು. ರಾಮಾನುಜನ್ ವೇದಿಕೆಯ ಮೇಲೆ ಬಂದು ನಿಂತು 'Here is a Joke' ಎಂದು ತಮ್ಮನ್ನೇ ತೋರಿಸಿಕೊಂಡರು.

ಜನ ನಕ್ಕರು.

ಮುಂದುವರೆದು, But it is not mine, But it is my father's ಎಂದರು.

ಮತ್ತೆ ಜನ ನಕ್ಕರು.

ಮುಂದುವರೆದು, When I look at you I don't see my difference.

ಮತ್ತೆ ಜನ ನಕ್ಕರು.

ಒಮ್ಮೆ ತರಗತಿಯಲ್ಲಿ ಪಾಠ ಹೇಳುತ್ತಿದ್ದಾಗ ತುಂಟ ಹುಡುಗರನ್ನು ಉದ್ದೇಶಿಸಿ ರಾಮಾನುಜನ್; Remember you are on benches and not an brenches.

ಕೆಲ ದಿನಗಳ ಒಳಿಕ ರಾಮಾನುಜನ್ ಹೀಗೇ ಹೇಳಿದಾಗ ವಿದ್ಯಾರ್ಥಿಗಳು, 'ಸಾರ್ , you

are repeating' ಅಂದರು.

ರಾಮಾನುಜನ್ : I never knew monkeys have memory ಅಂದರು (ಎ.ಕೆ. ರಾಮಾನುಜನ್ ನೆನಪಿನ ಸಂಪುಟ ೧೯೯೩ :೧೦).

ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ರಾಮಾನುಜನ್ ಹೇಳಿರುವ ಜೋಕೊಂದನ್ನು ನೆನಪಿಸುತ್ತಾರೆ. "ಅವರಿವರ ಪದ್ಯದ ಸಾಲುಗಳನ್ನು 'ಕೋಟ್' ಮಾಡುತ್ತಾ ಎಲ್ಲರನ್ನೂ ಪೆಚ್ಚು ಮಾಡುತ್ತಿದ್ದ ಕವಿ ಸುಮತೀಂದ್ರ ನಾಡಿಗರು ಒಮ್ಮೆ ರಾಮಾನುಜನ್ನರ ಎದುರು ತಮ್ಮ ಶಕ್ತಿ ವಿಶೇಷತೆಯನ್ನು ಮೆರೆದರು. ರಾಮಾನುಜನ್ ಕೂಡಲೇ 'ಆಹಾ..... ಈ ನಾಡಿಗರನ್ನು ನೋಡಿ. ಹೋದ ಜನ್ಮದಲ್ಲಿ ಟೈಲರ್ ಆಗಿದ್ದರೂಂತ ಕಾಣುತ್ತೆ. ಎಷ್ಟೊಂದು 'ಕೋಟ್' ಮಾಡುತ್ತಾರಂತೆ. ಅಂತ ಹೇಳಿ ಊದಿದ ಬಲೂನಿಗೆ ಸೂಜಿ ತಾಗಿಸಿ ಬಿಟ್ಟರು'' (ಎ.ಕೆ. ರಾಮಾನುಜನ್: ನೆನಪಿನ ಸಂಪುಟ: ೧೯೯೩ : ೩೫).

## ಕೊನೆಯ ಮಾತು

ಎ.ಕೆ. ರಾಮಾನುಜನ್ ಭಾರತದ ಒಬ್ಬ ಶ್ರೇಷ್ಠ ಕವಿ, ಅನುವಾದಕ, ಭಾಷಾ ವಿಜ್ಞಾನಿ ಮತ್ತು ಜಾನಪದ ವಿದ್ವಾಂಸರೆಂದು ಹೆಸರು ಗಳಿಸಿಕೊಂಡಿದ್ದಾರೆ. ಅವರು ಕನ್ನಡದಲ್ಲಿ ಮೂರು ಕವನ ಸಂಕಲನಗಳನ್ನೂ ಇಂಗ್ಲಿಷಿನಲ್ಲಿ ನಾಲ್ಕು ಕವನ ಸಂಕಲನಗಳನ್ನೂ ಪ್ರಕಟಿಸಿದರು. ಮಾತ್ರವಲ್ಲದೆ ಪ್ರಾಚೀನ ತಮಿಳಿನ ಸಂಗಂ ಕಾವ್ಯಗಳು, ಕನ್ನಡದ ಪ್ರಮುಖ ನಾಲ್ವರು ವಚನಕಾರರ ವಚನಗಳು ಮತ್ತು ಭಾರತದಿಂದಾಯ್ದ ೧೦೫ ಜನಪದ ಕತೆಗಳನ್ನು ಅನುವಾದಿಸಿ ಇಪತ್ತಿಗೂ ಸೃಜನಶೀಲ ಅನುವಾದಕರೆನಿಸಿಕೊಂಡಿದ್ದಾರೆ. ಅವರ ಜನಪದ ಕತೆಗಳ ಕುರಿತ ಅಧ್ಯಯನ ಭಾರತದ ಸಂಸ್ಕೃತಿಯನ್ನು ಪಾಶ್ಚಾತ್ಯ ವಿದ್ವಾಂಸರಿಗೆ ಪರಿಚಯಿಸುವುದಕ್ಕೆ ಸಾಧ್ಯವಾಯಿತು. ಎಚ್.ಎಸ್. ಶಿವಪ್ರಕಾಶ್ ಅವರು ಹೇಳುವಂತೆ, "ರಾಮಾನುಜನ್ ಅವರು ತಮ್ಮ ತರ್ಜುಮೆ ಮತ್ತು ವಿವರಣೆಗಳ ಮುಖಾಂತರ ಭಾರತವನ್ನು ಪಡುವಣಿಗರಿಗೆ ಮುಟ್ಟಿಸಿದ್ದು ಪಡುವಣಿಗರಿಗೆ ಬೇಕಾದ ರೀತಿಯಲ್ಲಿ. ಅಂದರೆ ಅವರ ಚಿಂತನೆಯ ಚೌಕಟ್ಟುಗಳಲ್ಲಿ ನಮ್ಮ ಸಂಸ್ಕೃತಿಯನ್ನು ಇರುಕಿಸುವುದರಲ್ಲಿ ಗೆದ್ದರೇ ಹೊರತು ನಮ್ಮ ಸಾಂಸ್ಕೃತಿಕ ಪಾಠಗಳ ಹಿಂದೆ ಮಾಡಿರುವ ಚಿಂತನೆಯ ಚೌಕಟ್ಟುಗಳನ್ನು ಆಲೋಚನೆಯ ಸರಕುಗಳನ್ನು ಪಡುವಣಿಗರಿಗೆ ದಾಟಿಸಲಿಲ್ಲ; ಅಥವಾ ಅವರ ಚಿಂತನೆಯ ಚೌಕಟ್ಟುಗಳಿಗೆ ನಮ್ಮ ಸಾಂಸ್ಕೃತಿಕವಾದ ತನ್ನರಿವಿನ ಮೂಲಕ ಸವಾಲೊಡ್ಡಲಿಲ್ಲ. ಅವರ ತರ್ಜುಮೆಯ ರೀತಿ ಕೂಡ ನುಡಿಗಟ್ಟುಗಳನ್ನು ಇಂಗ್ಲಿಷಿನಲ್ಲಿ ಒಪ್ಪಿತವಾದ ಅಲ್ಲಿನ ನಷ್ಯ ನಡುಗಟ್ಟಿಗೆ ತರುತ್ತದೆ ಹೊರತು ಆ ನುಡಿಗಟ್ಟಿನ ನೆಲೆಗಟ್ಟನ್ನು ಅಲುಗಿಸುವ ರೀತಿಯದಲ್ಲ'' (ಸಂಚಯ : ೧೯೯೩ : ೧೦–೧೧).

ಒಟ್ಟಿನಲ್ಲಿ ಹೇಳುವುದಾದರೆ ಅವರ ವಿದ್ವತ್ತು, ವೈಜ್ಞಾನಿಕ ಅಧ್ಯಯನ ಕ್ರಮ, ಕಿರಿಯ ಸಂಶೋಧಕರಿಗೆ ಪ್ರೇರಣೆಯಾಗಿದೆ, ಮಾರ್ಗದರ್ಶಿಯಾಗಿದೆ.

# ಅನುಬಂಧ

## ಕೊನೆ ಟಿಪ್ಪಣಿಗಳು

೧. 'ಹೊಕ್ಕುಳಲ್ಲಿ ಹೂವಿಲ್ಲ' (೧೯೬೯) ಕವನ ಸಂಕಲನ ಕುರಿತು ಹಲವಾರು ಲೇಖನಗಳು ಪ್ರಕಟವಾಗಿವೆ. ಅವೆಲ್ಲವುಗಳ ಚರ್ಚೆಯನ್ನು ಈ ಪ್ರಬಂಧದಲ್ಲಿ ಕೊಡಲು ಸಾಧ್ಯವಾಗಲಿಲ್ಲ. ಆದರೆ ರಾಮಾನುಜನ್‌ರ ಕಾವ್ಯದ ಒಳನೋಟವನ್ನು ಬಿಂಬಿಸುವ ೨೫ ಜನ ವಿಮರ್ಶಕರ ಅಭಿಪ್ರಾಯಗಳನ್ನು ಪ್ರಬಂಧದ ಒಳಗಡೆ ಕೊಡಲಾಗಿದೆ.

ಇನ್ನೂ ಹೆಚ್ಚಿನ ಅಭ್ಯಾಸಕ್ಕೆ, ಟಿ. ಪಿ. ಅಶೋಕ (ಸಂ)೧೯೯೩, 'ಎ.ಕೆ. ರಾಮಾನುಜನ್ – ನೆನಪಿನ ಸಂಪುಟ,' ಪುತ್ತೂರು : ಕರ್ನಾಟಕ ಸಂಘ, ಕೃತಿಯಲ್ಲಿ ಸಂಪಾದಿತವಾದ ಬೇರೆ ಬೇರೆ ಲೇಖನಗಳನ್ನು ನೋಡಬಹುದು.

ಅ) ಕನ್ನಡ ಕಾವ್ಯಕ್ಕೊಂದು ಹೊಸ ಕಣ್ಣು : ರಾಮಾನುಜನ್ನರ ಹೊಕ್ಕುಳಲ್ಲಿ ಹೂವಿಲ್ಲ . (ಶಾಂತಿನಾಥ ದೇಸಾಯಿ) ಪು : ೪೫ –೫೦

ಆ) ಎ.ಕೆ. ರಾಮಾನುಜನ್ : ಹೊಕ್ಕುಳಲ್ಲಿ ಹೂವಿಲ್ಲ (ಪಿ. ಲಂಕೇಶ್) ಪು : ೫೧ –೫೫

ಇ) ಎ.ಕೆ.ರಾಮಾನುಜನ್ನರ ಹೊಕ್ಕುಳಲ್ಲಿ ಹೂವಿಲ್ಲ(ಬಿ. ಟಿ. ದೇಸಾಯಿ) ಪು : ೫೬ –೬೧

ಈ) ಹೊಸಹಾದಿಯ ಆವಿಷ್ಕಾರ: ಹೊಕ್ಕುಳಲ್ಲಿ ಹೂವಿಲ್ಲ (ಸುಬ್ರಾಯ ಚೊಕ್ಕಾಡಿ)ಪು :೭೧–೭೫

ಉ) ಎ.ಕೆ. ರಾಮಾನುಜನ್ನರ ಕಾವ್ಯ : ಒಂದು ವಿವೇಚನೆ (ಡಿ. ಎ. ಶಂಕರ್) ಪು : ೮೫–೯೫

೨. '...ಮತ್ತು ಇತರ ಪದ್ಯಗಳು (೧೯೭೭) ಹಾಗೂ 'ಕುಂಟೋಬಿಲ್ಲೆ' (೧೯೯೦) ಸಂಕಲನಗಳಿಗೆ ವಿಮರ್ಶೆಗಳು ಬಂದಿರುವುದು ಕಡಿಮೆ. ಟಿ. ಪಿ. ಅಶೋಕ (ಸಂ.) ೧೯೯೩, 'ಎ.ಕೆ. ರಾಮಾನುಜನ್ – ನೆನಪಿನ ಸಂಪುಟ', ಪುತ್ತೂರು : ಕರ್ನಾಟಕ ಸಂಘ – ಮೇಲಿನ ಪುಸ್ತಕದಲ್ಲಿ ಎರಡು ಲೇಖನಗಳನ್ನು ಗಮನಿಸಬಹುದು.

ಅ) ಎ.ಕೆ. ರಾಮಾನುಜನ್:'...ಮತ್ತು ಇತರ ಪದ್ಯಗಳು'. (ಡಿ.ಆರ್. ನಾಗರಾಜ) ಪು: ೭೯–೮೦

ಆ) ಎ.ಕೆ. ರಾಮಾನುಜನ್ : ಕುಂಟೋಬಿಲ್ಲೆ (ಟಿ. ಪಿ. ಅಶೋಕ) ಪು : ೮೧–೮೭

೩. ಕೀರ್ತಿನಾಥ ಕುರ್ತಕೋಟಿ, ೧೯೬೫. 'ಹೊಸ ಕ್ಷಿತಿಜ' ಕೃತಿಯಲ್ಲಿ ಪ್ರಕಟವಾದ ಲೇಖನವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

೪. ಗಾನಪ್ರಿಯ ಮತ್ತು ನಾದಬಿಂದು ಎರಡೂ ನಾಟಕಗಳ ಸಾರಾಂಶ ಅಭಿಪ್ರಾಯವನ್ನು ಟಿ.ಪಿ. ಅಶೋಕ ಅವರು ಸಂಪಾದಿಸಿರುವ 'ಎ.ಕೆ. ರಾಮಾನುಜನ್ – ನೆನಪಿನ ಸಂಪುಟ' (೧೯೯೩)

ಕೃತಿಯ ಮುನ್ನುಡಿಯಿಂದ ಆಯ್ದುಕೊಳ್ಳಲಾಗಿದೆ.

೫. ಮಗ ತಂದೆಯನ್ನು ಕೊಲೆ ಮಾಡುವುದು, ಮಗ ತಾಯಿಯನ್ನು ಮದುವೆಯಾಗುವುದು, ಮಗಳು ತಂದೆಯನ್ನು ಪ್ರೀತಿಸುವುದು ಮತ್ತು ಆತನ ಸಾವನ್ನು ನಿರೀಕ್ಷಿಸುವದು – ಹೀಗೆ ಕುಟುಂಬದೊಳಗೆ ಆಗುವ ಸಂಬಂಧಗಳನ್ನು ನಿಷೇಧಿಸುವ ಆಶಯವನ್ನು ಒಳಗೊಂಡ ಕತೆಗಳು ಗ್ರೀಕ್‌ನಲ್ಲಿ ಸಿಗುತ್ತವೆ. ಸೋಫೋಕ್ಲೀಸ್ ಮತ್ತು ಯೂರಿಪಿಡಿಸ್ ನಾಟಕಗಳಾದ ಇಲೆಕ್ಟ್ರಾ – ಮಿಡಿಯಾ ಇದಕ್ಕೆ ಒಳ್ಳೆಯ ನಿದರ್ಶನ.

೬. ಹೆಚ್ಚಿನ ಓದಿಗಾಗಿ ಪ್ರೊ। ಕಾರ್ಲೋಸ್, ೧೯೯೩, 'ತಮಿಳು ಕಾವ್ಯಮೀಮಾಂಸೆ', ಅಕ್ಷರ ಚಿಂತನ – ದಲ್ಲಿ ನೋಡಬಹುದು. ಇಲ್ಲಿ ಅಗಂ–ಪುರಂ ಬಗ್ಗೆ ರಾಮಾನುಜನ್‌ರು ಕೈಗೊಂಡ ಅಧ್ಯಯನದ ಬಹು ದೀರ್ಘ ಚರ್ಚೆಯನ್ನು ಗಮನಿಸಬಹುದು.

# ಗ್ರಂಥ ಸೂಚಿ


೧. ಎ. ಕೆ. ರಾಮಾನುಜನ್ ರ ಸ್ವತಂತ್ರ ಕೃತಿಗಳು

೧.೧. 'ನಾದಬಿಂದು' (ಬಾನುಲಿ ನಾಟಕ) ೧೯೫೯

೧.೨. 'ಗಾನಪ್ರಿಯ' (ಬಾನುಲಿ ನಾಟಕ) ೧೯೫೯

೧.೩ 'ಮಧುರೆಯಲ್ಲಿ ಒಂದು ತಲೆ' (ಸಣ್ಣಕಥೆ) (ನಡೆದು ಬಂದ ದಾರಿ – ಸಂಪುಟ ೧, (ಸಂ) ಕೀರ್ತಿನಾಥ ಕುರ್ತುಕೋಟಿ) ಮನೋಹರ ಗ್ರಂಥ ಮಾಲೆ. ಧಾರವಾಡ: ೧೯೬೫

೧.೪ 'ಗಾದೆಗಳು', ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ: ೧೯೫೫

೧.೫ 'ಹೊಕ್ಕುಳಲ್ಲಿ ಹೂವಿಲ್ಲ' (ಕವನ ಸಂಕಲನ) ೧೯೬೯

೧.೬ 'ಅಣ್ಣಯ್ಯನ ಮಾನವಶಾಸ್ತ್ರ' (ಸಣ್ಣಕತೆ) (ನಡೆದುಬಂದ ದಾರಿ – ಸಂಪುಟ ೨, (ಸಂ) ಕೀರ್ತಿನಾಥ ಕುರ್ತಕೋಟಿ) ಮನೋಹರ ಗ್ರಂಥಮಾಲೆ. ಧಾರವಾಡ: ೧೯೭೪

೧.೭. '..................... ಮತ್ತು ಇತರ ಪದ್ಯಗಳು', (ಕವನ ಸಂಕಲನ) ಮನೋಹರ ಗ್ರಂಥಮಾಲೆ. ಧಾರವಾಡ: ೧೯೭೭

೧.೮ 'ಕುಟೋಬಿಲ್ಲೆ', ಮನೋಹರ ಗ್ರಂಥಮಾಲೆ. ಧಾರವಾಡ : ೧೯೯೦

೧.೯. 'ಮತ್ತೊಬ್ಬನ ಆತ್ಮಚರಿತ್ರೆ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು: ೧೯೭೮

೧.೧೦. 'The Striders' (Poems) O.U.P. London 1966

1.11 "Relations" (Poems) O.U.P. London 1971

1.12 "Selected Poems" 1976

1.13 "Second Sight". (Poems) 1986

೨. ಎ. ಕೆ. ರಾಮಾನುಜನ್ ಬರೆದ ಲೇಖನಗಳು ಮತ್ತು ಅನುವಾದಿಸಿದ ಕೃತಿಗಳು

2.1 'The Clay mother-in-Law: Southern Folklore Quarterly 20, 2:130 - 5 1956

2.2 'Some Folktales from India ' Southern Folklore Quarterly, 20,3:154-63 1956b

2.3 The goddess of snakes and medival Bengali literature pt -2 History of Religions 3:300-22 (ed) 1962

2.4 ‘ಹಳದಿ ಮೀನು’, (ಮೂಲ: ಶೌರಿ) (ಅನು) ೧೯೬೬

2.5 'The Interior Landscape', (Translations from Ancient Tamil Sangam) Bloomington: Indiana University Press. 1967

2.6 'Song of the earth and other poems', (Translation of selected poems of Gopala Krishna Adiga - with M.G. Krishna Murthy) 1968

2.7. 'A Tamil Epic: Cilappatikaram - The Lay of the Anklet', (In Joseph Elder (Ed) Lecturers in Indian Civilization, P 104-106) Dubuque, Iowa : Kendall/Hunt. 1970

2.8 'Bread', (Translation of P. Lankesh's Kannada Short story (Ed) Adil Jussawalla) Penguin: In New writing in India. 1972

2.9 'Speaking of Shiva' (Translations of Selected wachana's of four twelth Century Kannada Vachanakara's: Basavanna, Dasimaiah, Allamaprabhu and Akkamahadevi) Penguin. 1973

2.10 'Men, Women and Saints', Lecture, Harward University.

2.11 'Samskara', (translation of Dr. U.R. Anatha Murthy's Kannada Novel) Oxford: Oxford University Press. 1976 b

2.12 'Tale and Teller in South India', (Paper Presented at the 7th Congress of the International society for folk narrative Research), Edinburgh. 1979

2.13 'The relevence of Folklore of South Asian Studies (Paper presented at the Conference of models and mataphers in South Asian Folklore) Berkly and Mysore. 1980

2.14 'Hymns for the Drowing' (Poems for Visnu by Nammalvar) Princction: Prenation University Press. 1981

2.15 'Hanchi' A Kannada Cinderella' (Cinderella : A Folklore casebook (ed) Alan Dundes) New york : Garlands Publishing. (Southern Folklore Quarterly, XX, 3 - Sept 1956) 1983

2.16 The Indian Oedipus', (Oedipus: A Folklore Case book p 234 - 61 (ed) Alen Dunotes and Lowell edmunds) NewYork: Garland publishing (In a Poddar, (Ed) Symposium on Indian Literature, Simla: Indian Institute of Advanced Study. 1971) 1983

2.17 'Poems of love and war', (Translations from Tamil Folk Poetry) New york : Columbia University Press. 1985

2.18 'Two Realms of Kannada Folklore ' (Another Harmony - New Essays on the Folklore of India. P.41 - 75 (ed) Stuart H. Black burn and A.K. Ramanujan) New York: Oxford University press. 1986

2.19 'Folktales from India', Viking Chicago : Chicago University. (Ed) 1990

**ಎ.ಕೆ. ರಾಮಾನುಜನ್ ಕೃತಿಗಳ ಕುರಿತು ಬಂದ ವಿಮರ್ಶಾ ಲೇಖನಗಳು :**

೩.೧ ಅಶೋಕ ಟಿ.ಪಿ., ೧೯೯೧ 'ಕುಂಟೋಬಿಲ್ಲೆ' (ಪುಸ್ತಕ ಪ್ರೀತಿ : ಎಂಬತ್ತೇಳು ಪುಸ್ತಕಗಳ ಅವಲೋಕನ (ಸಂ) ೧೯೯೩) ಹೆಗ್ಗೋಡು : ಅಕ್ಷರ ಪ್ರಕಾಶನ, ಸಾಗರ

೩.೨. ಅಶೋಕ ಟಿ.ಪಿ. (ಸಂ) ಎ.ಕೆ. ರಾಮಾನುಜನ್ : ನೆನಪಿನ ಸಂಪುಟ' ಪುತ್ತೂರು : ಕರ್ನಾಟಕ ಸಂಘ, ವಿವೇಕಾನಂದ ಕಾಲೇಜು. ೧೯೯೩

೩.೩ ಕೀರ್ತಿನಾಥ ಕುರ್ತುಕೋಟಿ, 'ವಿಕಾಸ–ಎ.ಕೆ. ರಾಮಾನುಜನ್' (ನವ್ಯ ಕಾವ್ಯ ಪ್ರಯೋಗ (ಸಂ) ಜಿ.ಬಿ. ಜೋಶಿ) ಧಾರವಾಡ : ಮನೋಹರ ಗ್ರಂಥಮಾಲೆ. ೧೯೬೫

೩.೪ ಚಂದ್ರಶೇಖರ ಕಂಬಾರ, (ಸಂ.) 'ಕನ್ನಡ ಜಾನಪದ ವಿಶ್ವಕೋಶ – ಸಂ: ೨ (ಪು : ೧೭೩೮) ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು. ೧೯೮೫

೩.೫. ನಾಗರಾಜ ಡಿ.ಆರ್. 'ಅಮೃತ ಮತ್ತು ಗರುಡ', ಬೆಂಗಳೂರು : ಪುಸ್ತಕ ಚಂದನ. ೧೯೮೩

೩.೬ ನಾಯಕ ಜಿ.ಎಚ್., (ಸಂ) 'ಹೊಸಗನ್ನಡ ಕವಿತೆ', ಬೆಂಗಳೂರು : ಕನ್ನಡ ಸಾಹಿತ್ಯ ಪರಿಷತ್ತು. ೧೯೮೫

೩.೭ ನಾಯಕ ಜಿ.ಎಚ್., (ಸಂ) ಕನ್ನಡ ಸಣ್ಣಕಥೆಗಳು, ಇಂಡಿಯಾ : ನ್ಯಾಷನಲ್ ಬುಕ್ ಟ್ರಸ್ಟ್ ೧೯೯೧

೩.೮ ನಾಯಕ ಹಾ.ಮಾ. (ಸಂ.) 'ಕರ್ನಾಟಕ – ಕನ್ನಡ ವಿಷಯ ವಿಶ್ವಕೋಶ' ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ. ೧೯೭೯

೩.೯ ನಾಯಕ ಹಾ.ಮಾ 'ಚಿರವಾದ ನೆನಪು' (ತರಂಗ ವಾರ ಪತ್ರಿಕೆ, ಆಗಸ್ಟ್ ೧೫ (ಸಂ) ಸಂತೋಷ ಕುಮಾರ ಗುಲ್ವಾಡಿ) ಮಣಿಪಾಲ : ಪ್ರೆಸ್ ಕಾರ್ನರ್ ೧೯೯೩

೩.೧೦ ಪುರುಷೋತ್ತಮ ಬಿಳಿಮಲೆ, 'ಮೊದಲನೋಟ........', (ಪುಸ್ತಕ ಮಾಹಿತಿ ಸಂ: ೨, ಸಂ:೧) ಹಂಪಿ : ಕನ್ನಡ ವಿಶ್ವವಿದ್ಯಾಲಯ ೧೯೯೪

೩.೧೧ ರಹಮತ್ ತರೀಕೆರೆ, 'ಎ.ಕೆ. ರಾಮಾನುಜನ್ : ಚಿಕಾಗೋವಿನಿಂದ ಹಂಪಿ , (ಪುಸ್ತಕ ಮಾಹಿತಿ ಸಂಪಾದಕೀಯ : ಜುಲೈ) ಹಂಪಿ : ಕನ್ನಡ ವಿಶ್ವವಿದ್ಯಾಲಯ. ೧೯೯೩

೩.೧೨. ಲಂಕೇಶ ಪಿ. ೧೯೯೦, ಜುಲೈ ೨೨ 'ರಾಮಾನುಜನ್ ಕವನ ವಾಚನ, (ಟೀಕೆ ಟಿಪ್ಪಣಿ : ಹತ್ತು ವರುಷದ ಕೆಲವು ಬರಹಗಳು (ಸಂ) ೧೯೯೧) ಬೆಂಗಳೂರು : ಪತ್ರಿಕಾ ಪ್ರಕಾಶನ.

* ಸುಚಿತ್ರ ಲತಾ ಮತ್ತು ಮೀರಾ (ಅನು) 'ತಮಿಳು ಕಾವ್ಯ ಮೀಮಾಂಸೆ (ಮೂಲ : ಡಾ.ಕಾರ್ಲೋಸ್) ಹೆಗ್ಗೋಡು : ಅಕ್ಷರ ಚಿಂತನ ೧೯೯೩

3.13 Desai S.k, 'Mixing Memory and Desire : Small scale Reflections of the poetry of A.K. Ramanujan', (Perspections of Indian Poetry in English (Ed) M.K. Naik) Abinav Publication. 1984

3.14 Oevy G.N., 'Alienation as a means of Self Exploration: A study of A.K. Ramanujan's Poetry' In Chandrabhaga. (No.6, Winter) 1981

3.15 Devendra Kohlli, 'Landscape and Poetry', JCL, XIII, 3 April. 1979

3.16 Naik M.K. 'A.K. Ramanujan and the search for Roots', New Delhi: The Humanities Review. 1979

3.17 Raghavendra Rao. K. 'Reverse Romanticism: The case of A.K. Ramanujan's - the Strider's (In Aspects of Indian English (Ed) Naik M.K) Delhi : Mac Millan. 1979

3.18. Srinivasa Iyengar K.R. 'Indian Writing in Egnlish', (Asia - Bombay : P: 671) 1962/1973.

3.19 Narasimhaiah C.D., 'The swan and the eagle' Simla: Indian Institute of Advanced Study. 1969

3.20 Taqi Ali Mirza, 'A.K. Ramanujan's 'Particular hell', (In Indian Poetry in English (Ed) V.A. Shahane and M. Sivarama Krishna) Hydarabad: Osmania Universtiy. 1977

3.21 Verghese Paul C., 'Problems of the Indian Creative Writer in English, Bombay: Somaiya Publications. 1971

3.22. Williams H.M., 'Indo - Anglian Literature: A Survey', Bombay : Orient Languages. 1976

3.23 William Walsh, 'Small observations on a Large Subject, (In Aspects of Indian English (Ed) M.K. Naik) Delhi : Macmillan. 1979.

೪. ದಿನ ಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಎ.ಕೆ. ರಾಮಾನುಜನ್ ಬಗೆಗೆ ವಿವರಗಳು

೪.೧ ಕನ್ನಡ ಪ್ರಭ – ದಿನಪತ್ರಿಕೆ, 'ಕಣ್ಮರೆಯಾದ ಉಜ್ವಲ ಪ್ರತಿಭೆ – ರಾಮಾನುಜನ್', ೧೯೯೩ – ಜುಲೈ ೧೫; ಸಂ : ೨೬, ಸಂ: ೨೫೩.

೪.೨ ಪ್ರಜಾವಾಣಿ – ದಿನಪತ್ರಿಕೆ, ಎ.ಕೆ. ರಾಮಾನುಜನ್ ಇನ್ನಿಲ್ಲ, ೧೯೯೩–ಜುಲೈ ೧೫; ಸಂ : ೫, ಸಂ. ೧೯೫

೪.೩ ಸಂಯುಕ್ತ ಕರ್ನಾಟಕ, 'ನ್ಯೂಯಾರ್ಕಿನಲ್ಲಿ ಕನ್ನಡ ಕವಿ ರಾಮಾನುಜನ್ ನಿಧನ'. ೧೯೯೩ – ಜುಲೈ ೧೫; ಸಂ : ೬೧ ಸಂ : ೮೩

೪.೪ ಅಭಿಮತ – ಕನ್ನಡ ಮಾಸಿಕ, 'ಖ್ಯಾತ ಸಾಹಿತಿ ಕಣ್ಮರೆ', ೧೯೯೩, ಜುಲೈ, ದೆಹಲಿ ಕನ್ನಡ ಸಂಘ

೪.೫ ಸಂಚಯ – ಸಾಂಸ್ಕೃತಿಕ ಸಂಕಲನ', 'ಎ.ಕೆ. ರಾಮಾನುಜನ್ – ಹೆಜ್ಜೆ ಗುರುತು', ೧೯೯೩–ಡಿಸೆಂಬರ್, ಸಂ:೬, ಸಂ : ೫.

೪.೬ ಸಂವಾದ – ಸಾಹಿತ್ಯಿಕ ಸಾಂಸ್ಕೃತಿಕ ಸಂಕಲನ, 'ಎ.ಕೆ. ರಾಮಾನುಜನ್ ಸ್ಮರಣೆ, ೧೯೯೩; ಸಂಯುಕ್ತ ಸಂಚಿಕೆ: ೩೨ –೩೩

Rama

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು